# ನಡುಗಾಲ ಪ್ರಭುತ್ವ



*Interim Government*

ಕೃಷ್ಣಾಚಾರ್ಯ ಜೋಷಿ,
ಬಿ. ಎ. ಎಲ್. ಎಲ್. ಬಿ. ಎಡ್ವೊಕೇಟ್.

ಬೆಲೆ ೧೨ ಆಣೆ. ಕಾಚೀಗುಡ್ಡಾ, ಹೈದ್ರಾಬಾದ್.

## ನಡುಗಾಲ ಪ್ರಭುತ್ವದ ಉಪಾಧ್ಯಕ್ಷ



ಪಂಡಿತ್ ಜವಾಹರಲಾಲ ನೆಹರು ಅವರು

# ಮುನ್ನುಡಿ.

ಶ್ರೀಮಾನ್ ಕೃಷ್ಣಾಚಾರ್ಯ ಜೋಷಿ ಅವರ ನಡುಗಾಲ ಪ್ರಭುತ್ವ ಎಂಬ ಹೊಸಪ್ರಕಟನೆಯು ಇಂದಿನ ರಾಜಕೀಯ ಪರಿಸ್ಥಿತಿಯನ್ನು ವರ್ಣಿಸುವುದು. ಈ ಪುಸ್ತಕವು ಉಚಿತವಾದ ಸಮಯದಲ್ಲಿ ಹೊರಟಿದೆ. ಹಿಂದುಸ್ಥಾನದ ರಾಜಕೀಯ ರಂಗಭೂಮಿಯ ಮೇಲೆ ನಡೆದಿರುವ ವಿಷಯಗಳನ್ನು ತಿಳಿಯಲಿಚ್ಛಿಸುವವರು ಈ ಗ್ರಂಥವನ್ನು ಚನ್ನಾಗಿ ಸ್ವಾಗತಿಸುವರೆಂದು ಆಶಿಸಲಾಗಿದೆ. ಕೈಕೊಂಡ ವಿಷಯವನ್ನು ಅವರು ಪ್ರಮಾಣಬದ್ಧವಾಗಿ ನಿರೂಪಿಸಿದ್ದಾರೆ. ಹಿಂದುಸ್ಥಾನವು ಎದುರಿಸುತ್ತಿರುವ ನಿಜವಾದ ಸಮಸ್ಯದ ನೆಲೆಯನ್ನು ನೋಡಲಿಕ್ಕೆ ಸಾಕಾಗುವಷ್ಟು ಪರಿಜ್ಞಾನ ಇದು ಹುಟ್ಟಿಸುವುದು. ಈ ಚಿಕ್ಕ ಪುಸ್ತಕವು ಹೊಸಬರಿಗೆ ರಾಜಕೀಯ ವಿಷಯಗಳನ್ನು ತಿಳಿಯಲು ಸಹಾಯಮಾಡುವುದಲ್ಲದೆ ಹೆಚ್ಚಿನ ಜ್ಞಾನವನ್ನು ಪಡೆಯಲಿಕ್ಕೆ ಅನುಕೂಲ ಮಾಡಿಕೊಡುವುದು.

ಸ್ವಾಮಿ ರಾಮಾನಂದ ತೀರ್ಥ

ಹೈದ್ರಾಬಾದ್.(ದ.)          ಅಧ್ಯಕ್ಷ ಹೈದ್ರಾಬಾದ್ ಸ್ಟೇಟ್ ಕಾಂಗ್ರೆಸ್.

ತಾ. ೨೦-೧೨-೧೯೪೬

# FOREWORD

Sjt. Krishnacharya Joshi's new publication dealing with the present Indian political situation is a timely contribution and would be well received by those who wish to know something about what is beeing enacted on the Indian political stage. It is a faithful narrative and gives ample insight to probe into the real problem facing India today. It is handy and enables a beginner to understand things and also prepares him for receiving more light on the subject.

Dated 20-12-1946
Hyderabad Dn

Swami Ramanand Tirtha
President,
Hyderabad State Congress

# ನನ್ನ ಮಾತು.

ಸಂಪೂರ್ಣ ಸ್ವಾತಂತ್ರ್ಯವೇ ಹಿಂದುಸ್ಥಾನದ ಹೆಗ್ಗುರಿ. ನಡುಗಾಲ ಪ್ರಭುತ್ವದ ಸ್ಥಾಪನೆಯಿಂದ ಸ್ವರಾಜ್ಯ ಪ್ರಾಪ್ತವಾಗಿ ಸ್ವಾತಂತ್ರ್ಯದ ಉದಯವಾಗುತ್ತಿರುವುದು. ಹಿಂದುಸ್ಥಾನಕ್ಕೆ ಪ್ರಾಪ್ತವಾಗಲಿರುವ ಸ್ವಾತಂತ್ರ್ಯದಲ್ಲಿ ದೇಶೀಯ ಸಂಸ್ಥಾನಗಳ ಜನತೆ ಸಹಭಾಗಿಗಳು. ಸ್ವಯಂ ನಿರ್ಣಯ ತತ್ವಕ್ಕೆ ಅನುಸರಿಸಿ ಭಾಷೆಗಳ ತಳಹದಿಯ ಮೇಲೆ ಪ್ರಾಂತಗಳನ್ನು ರಚಿಸಿಕೊಳ್ಳುವ ಹಕ್ಕು ಜನತೆಗೆ ಪ್ರಾಪ್ತವಾಗಿದೆ. ಆದರೆ ಈಗ ಹೊಣೆಗಾರ ಪ್ರಭುತ್ವವನ್ನು ಸ್ಥಾಪಿಸಿಕೊಳ್ಳುವುದೇ ಸಂಸ್ಥಾನಗಳ ಜನತೆಯ ಮುಖ್ಯ ಕೆಲಸ.

ಹಿಂದುಸ್ಥಾನವು ಸ್ವತಂತ್ರವಾದಮೇಲೆ ಸಾರ್ವಭೌಮತ್ವವು ಜನತೆಯಲ್ಲಿ ಕೇಂದ್ರಿತವಾಗುವುದು. ಘಟನಾ ಸಮಿತಿಯು ಸ್ವತಂತ್ರ ಸಾರ್ವಭೌಮ ಪ್ರಜಾರಾಜ್ಯವನ್ನು ಸ್ಥಾಪಿಸಲಿಕ್ಕೆ ಪ್ರಯತ್ನಿಸುತ್ತಿರುವುದು. ಈಗ ಹೊಸ ಸ್ವತಂತ್ರ ಭಾರತದ ನಿರ್ಮಾಣವಾಗಲಿರುವುದು. ಇದು ರಾಷ್ಟ್ರೀಯ ಪರ್ವಕಾಲ. ಕನ್ನಡಿಗರಿಗೆ ಇಂದಿನ ರಾಜಕೀಯ ವಿಷಯಗಳ ಪರಿಚಯ ಮಾಡಿಕೊಡುವುದೇ ಈ ಪುಸ್ತಕದ ಉದ್ದೇಶ.

ಹೈದ್ರಾಬಾದ್ ಸ್ಟೇಟ ಕಾಂಗ್ರೆಸ್ಸಿನ ಅಧ್ಯಕ್ಷರಾದ ಪೂಜ್ಯ ಸ್ವಾಮಿ ರಾಮಾನಂದ ತೀರ್ಥರು ಮುನ್ನುಡಿಯನ್ನು ಬರೆದು ನನ್ನಮೇಲೆ ಉಪಕಾರ ಮಾಡಿರುವರು. ಈ ಪುಸ್ತಕವನ್ನು ಪ್ರಕಟಿಸುವ ಕೆಲಸದಲ್ಲಿ ಕೆಲವು ಜನ ಮಿತ್ರರು ನೆರವಾಗಿದ್ದಾರೆ. ಅವರಿಗೆ ನಾನು ಋಣಿಯಾಗಿದ್ದೇನೆ.

೨೬—೧೨—೧೯೪೬

ಪರಿಮಳ ಕುಂಜ, ಕಾಚೀಗುಡ್ಡಾ
ಹೈದ್ರಾಬಾದ್. ದ.

ಕೃಷ್ಣಾಚಾರ್ಯ
ಜೋಷಿ.

# ಅನುಕ್ರಮಣಿಕೆ.





# ೧ ನೆಯ ಪ್ರಕರಣ.



## ನಡುಗಾಲ ಪ್ರಭುತ್ವದ ಹಿನ್ನೆಲೆ.

ಹಿಂದುಸ್ಥಾನವು ಸ್ವಾತಂತ್ರ್ಯವನ್ನು ಪಡೆಯಲಿಕ್ಕೆ ಈಗ ಕ್ರಾಂತಿಕಾರಕ ನಡುಗಾಲದಲ್ಲಿ ಸಾಗಿದೆ. ಸ್ವಾತಂತ್ರ್ಯವೆಂದರೆ ಸಂಪೂರ್ಣ ಆಧಿಪತ್ಯ ಉಳ್ಳ ಸ್ವರಾಜ್ಯ. ಸ್ವಯಂ ನಿರ್ಣಯ ತತ್ವಕ್ಕನುಸರಿಸಿ ಪ್ರಭುತ್ವವನ್ನು ರಚಿಸಿ, ನಡೆಸುವದೇ ಸ್ವರಾಜ್ಯ. ಆಧಿಪತ್ಯವು ಸ್ವರಾಜ್ಯದ ಜೀವಾಳ. ಅಂತಸ್ಥ ನಿಯಂತ್ರಣ ಮತ್ತು ಬಾಹ್ಯ ಅಧಿಕಾರದಿಂದ ಪೂರ್ಣ ಸ್ವಾತಂತ್ರ್ಯ ಇವೇ ಆಧಿಪತ್ಯದ ಮುಖ್ಯ ಲಕ್ಷಣಗಳು. ಹಿಂದುಸ್ಥಾನದ ಆಧಿಪತ್ಯವು ಇಂದು ಇಂಗ್ಲಂಡಿನ ಮಕುಟದಲ್ಲಿ ಕೇಂದ್ರಿತವಾಗಿದೆ. ೧೯೩೫ ನೆಯ ಶಾಸನದ ಎರಡನೆಯ ವಿಭಾಗದ ಪ್ರಕಾರ ಹಿಂದುಸ್ಥಾನದ ರಾಜ್ಯಾಧಿಕಾರವು ಬ್ರಿಟಿಷ್ ಪ್ರಭುತ್ವದ ಅಧೀನದಲ್ಲಿರುವುದು. ಭಾರತದ ಸಚಿವರು, ಸಭೆಯಿಂದ ನಿಯುಕ್ತರಾದ ಗವರ್ನರ್‌ಜನರಲ್ ಮತ್ತು ಗವರ್ನರರು ಬ್ರಿಟಿಷ್ ಪ್ರಭುತ್ವದ ಕಾರ್ಯಚಿಂತಕರು. ಇವರು ಹಿಂದುಸ್ಥಾನದ ರಾಜ್ಯತಂತ್ರವನ್ನು ನಡೆಸುತ್ತಿದ್ದು ಪಾರ್ಲಿಮೆಂಟಿಗೆ ಹೊಣೆಗಾರರು. ಬ್ರಿಟಿಷ್‌ಪಾರ್ಲಿಮೆಂಟಿನ ಕೈಯಲ್ಲಿ ಸೇರಿದ್ದ ಆಧಿಪತ್ಯದ ವಿಕೇಂದ್ರೀಕರಣ ಮಾಡಿ ರಾಜ್ಯವ್ಯವಸ್ಥೆಯನ್ನು ಕ್ರಮೇಣ ಹಿಂದೀಯರ ಸ್ವಾಧೀನ ಮಾಡುತ್ತೇವೆಂದು ಬ್ರಿಟಿಷ್ ಪ್ರಭುತ್ವದವರು ವಚನ ಕೊಡುತ್ತ ಬಂದಿರುವರು. ನಡುಗಾಲ ಪ್ರಭುತ್ವದ ಸ್ಥಾಪನೆಯಿಂದ ಬಹಳಮಟ್ಟಿಗೆ ರಾಜ್ಯಾಧಿಕಾರವು ಹಿಂದೀಯರ ಕೈಸೇರಿತೆಂದು ಒಪ್ಪಬೇಕಾಗುವುದು.

ಭಾರತೀಯರ ರಾಜಕೀಯ ಆಂದೋಲನದ ಪರಿಣಾಮದಿಂದ ಈ ರಾಜ್ಯಾಧಿಕಾರವು ಅವರಿಗೆ ಪ್ರಾಪ್ತವಾಗುತ್ತಿರುವುದೆಂದು ಹೇಳಬೇಕಾಗಿದೆ.

ಯಾಕೆಂದರೆ ರಾಷ್ಟ್ರಸಭೆಯಾದ ಕಾಂಗ್ರೆಸ್ಸು ಕಳೆದ ೬೦ ವರುಷಗಳಿಂದ ಸ್ವಾತಂತ್ರ್ಯ ಸಾಧನೆಗಾಗಿ ಹೋರಾಡುತ್ತಿರುವುದು. ಈ ಹೋರಾಟದ ಮೂರು ಅವಸ್ಥೆಗಳು. ಮೊದಲನೆಯ ಅವಸ್ಥೆಯಲ್ಲಿ ಬೇಡಿಕೆ, ಬಿನ್ನವತ್ತಳೆ, ತೀರ್ಮಾನ ಇವುಗಳಮೂಲಕ ರಾಜ್ಯಾಂಗಸುಧಾರಣೆಗಳನ್ನು ಪಡೆಯಲಿಕ್ಕೆ ಅದು ಪ್ರಯತ್ನ ಪಟ್ಟಿತು. “ಸ್ವರಾಜ್ಯವು ನನ್ನ ಜನ್ಮಸಿದ್ಧಹಕ್ಕು. ಅದನ್ನು ಸಂಪಾದಿಸುತ್ತೇನೆ” ಎಂದು ಸಾರಿಹೇಳಿದ ಲೋಕಮಾನ್ಯ ಟಿಳಕರ ಕಾಲದಲ್ಲಿ ಕಾಂಗ್ರೆಸ್ಸು ಎರಡನೆಯ ಅವಸ್ಥೆಗೆ ಮುಟ್ಟಿ ಅದರಲ್ಲಿ ಚಲನೆಯುಂಟಾಯಿತು. ಆ ಕಾಲ ಮುಗಿದ ಕೂಡಲೇ ಸತ್ಪುರುಷರಾಜಕಾರಣಿಗಳಾದ ಮಹಾತ್ಮಾ ಗಾಂಧಿಯವರು ಸತ್ಯ ಮತ್ತು ಅಹಿಂಸೆಗಳೆಂಬ ಅದ್ಭುತ ಸಾಧನೆಗಳಿಂದ ಹಿಂದುಸ್ಥಾನದ ರಾಜಕಾರಣದಲ್ಲಿ ಕ್ರಾಂತಿ ಮಾಡಿದರು. ಆಗ “ಮಾತು ಕೃತಿಯಾಯಿತು, ಪರಿಷತ್ತುಗಳು ಹರತಾಳಗಳಾದವು; ಬಿನ್ನವತ್ತಳೆ ಬಹಿಷ್ಕಾರವಾಯಿತು; ಬೇಡಿಕೆ ಪ್ರತಿಭಟನೆಯಾಯಿತು; ತೀರ್ಮಾನಗಳು ಆಚರಣೆಯಲ್ಲಿ ಬಂದು ಅಸಹಕಾರತೆ ಸತ್ಯಾಗ್ರಹಗಳಾದವು.” ಆಗಸ್ಟ ೧೯೪೨ರಲ್ಲಿ “ಹಿಂದುಸ್ಥಾನ ಬಿಟ್ಟುಹೋಗು” ಎಂಬ ತೀರ್ಮಾನವನ್ನು ಸ್ವೀಕರಿಸಿ ಹೂಡಿದ ಸ್ವಾತಂತ್ರ್ಯಯುದ್ಧದಲ್ಲಿ ರಾಜಕೀಯ ಆಂದೋಲನವು ಕಳಸಕ್ಕೇರಿತು. ಈ ಮಹಾಪುರುಷರ ತಪೋಬಲದ ಪ್ರಭಾವ ಮತ್ತು ಕಾಂಗ್ರೆಸ್ಸಿನ ತ್ಯಾಗ ಇವುಗಳ ಒತ್ತಾಯದಿಂದ ಬ್ರಿಟಿಷ್ ಪ್ರಭುತ್ವವು ಸಗ್ಗಿ ಅಧಿಕಾರವನ್ನು ಹಿಂದೀಯರಿಗೊಪ್ಪಿಸಲಿಕ್ಕೆ ಸಿದ್ಧವಾಯಿತು.

ಎರಡನೆಯ ಮಹಾಯುದ್ಧವು ಮತ್ತೊಂದು ಕಾರಣವಾಯಿತು. ದುರ್ಬಲ ರಾಷ್ಟ್ರಗಳ ಸ್ವಾತಂತ್ರ್ಯದ ಸಲುವಾಗಿ ಯುದ್ಧವನ್ನು ಹೂಡಿವೆವೆಂದು ಜಂಭಕೊಚ್ಚುವ ಇಂಗ್ಲೆಂಡಕ್ಕೆ, ಅಂತಹ ಸ್ವಾತಂತ್ರ್ಯವನ್ನು

ಪಡೆಯುವಹಕ್ಕು ಹಿಂದುಸ್ಥಾನಕ್ಕೆ ಇಲ್ಲವೆಂದುಹೇಳಲಿಕ್ಕೆ ಬರುವಂತಿದ್ದಿಲ್ಲ. ಜರ್ಮನಿಯ ಪರಾಭವದಿಂದ ಮಿತ್ರರಾಷ್ಟ್ರಗಳಿಗೆ ಮಹಾಯುದ್ಧದಲ್ಲಿ ಗೆಲವಾಯಿತು. ಆದುದರಿಂದ ಅಂತರ್ರಾಷ್ಟ್ರೀಯ ರಾಜಕೀಯ ಪರಿಸ್ಥಿತಿಗಳಲ್ಲಿ ಬದಲಾವಣೆಗಳಾದವು. ಇಂಗ್ಲಂಡಿನ ಕೂಲಿಕಾರ ಪ್ರಭುತ್ವವು ಅಧಿಕಾರಾರೂಢವಾದಮೇಲೆ ಹಿಂದುಸ್ಥಾನದಬಗ್ಗೆ ರಾಜಕೀಯ ಧೋರಣೆಯಲ್ಲಿ ಅನುಕೂಲ ಪರಿವರ್ತನೆಯಾಯಿತು. ಎಲ್ಲಕ್ಕೂಮೀರಿ ಇಂಗ್ಲಂಡ್ ಪ್ರಜಾ ಸತ್ತಾಪ್ರಿಯ ರಾಷ್ಟ್ರವು. ಹಿಂದುಸ್ಥಾನದಲ್ಲಿ ಬೇರೆ ರಾಜಕೀಯ ಸಿದ್ಧಾಂತಗಳು ಬೇರೂರಬಾರದೆಂಬ ದೂರದೃಷ್ಟಿಯಿಂದ ಪ್ರಜಾಪ್ರಭುತ್ವವನ್ನು ಸ್ಥಾಪಿಸಿಲು ಸಹಾಯ ಮಾಡುತ್ತಿರುವುದು,

ನಡುಗಾಲ ಪ್ರಭುತ್ವದ ಹಿನ್ನೆಲೆಯನ್ನು ತಿಳಿಯಬೇಕಾದರೆ ಬ್ರಿಟಿಷ್ ಪ್ರಭುತ್ವದವರು ಕಾಲಕಾಲಕ್ಕೆ ರಾಜ್ಯಾಧಿಕಾರವನ್ನು ಹಿಂದೀಯರಿಗೆ ಒಪ್ಪಿಸುವ ಬಗ್ಗೆ ಕೈಕೊಂಡ ನೀತಿ ಮತ್ತು ಯೋಜನೆ ಇವುಗಳನ್ನು ಪರಿಶೀಲನೆ ಮಾಡುವುದು ಅವಶ್ಯವಾಗಿದೆ. ಬ್ರಿಟಿಷ್ ಹಿಂದುಸ್ಥಾನದ ಪ್ರಾಂತಗಳಲ್ಲಿ ಸ್ವಾಯತ್ತತೆ, ಮತ್ತು ಕೇಂದ್ರದಲ್ಲಿ ಸಂಘಟಿತ ರಾಜ್ಯಪದ್ಧತಿಗಳನ್ನು ಸ್ಥಾಪಿಸುವುದು ೧೯೩೫ ನೆಯ ಶಾಸನದ ಉದ್ದೇಶ. ೧೯೨೧ ರಿಂದ ೧೯೩೭ ರ ವರೆಗೆ ಆಚರಣೆಯಲ್ಲಿದ್ದ ದ್ವಿದಳ ರಾಜ್ಯ ಪದ್ಧತಿಗಿಂತಲೂ ಪ್ರಾಂತೀಯ ಸ್ವಾಯತ್ತತೆಯು ಶ್ರೇಷ್ಠವೆಂದು ಹೇಳಬೇಕು. ಇದರಿಂದ ಹಿಂದೀಯರಿಗೆ ಹೆಚ್ಚಿನ ಅಧಿಕಾರಗಳು ಪ್ರಾಪ್ತವಾದವೆಂದು ವೈಧಾನಿಕ ಪಂಡಿತರು ಹೇಳುವರು. ಪ್ರಾಂತಾಧಿಕಾರಿಗಳಾದ ಗವರ್ನರ್ ಅವರಿಗೆ ವಿಶೇಷ ಹೊಣೆಗಳಿದ್ದಕಾರಣ ತಮಗೆ ಯೋಗ್ಯವೆಂದು ತಿಳಿದಂತೆ ನಡೆಯಲಿಕ್ಕೆ ಮತ್ತೂ ತಮ್ಮ ವೈಯಕ್ತಿಕ ನಿರ್ಣಯಗಳನ್ನು ಕೊಡಲಿಕ್ಕೆ ಆಸ್ಪದವಿರುವುದು. ಆದರೆ ಅವರು ಈ ವಿಶೇಷ ಅಧಿಕಾರಗಳ ಉಪಯೋಗ

ಮಾಡುವುದಿಲ್ಲವೆಂದು ಅಭಿವಚನ ಕೊಟ್ಟಿರುವರು. ಈ ಘಟನೆಯುಪೋರಿಗೆ ಅವಶ್ಯಕ ಮತ್ತೂ ಕನಿಷ್ಠ ಪ್ರಮಾಣದ ನಿಯಂತ್ರಣವನ್ನು ಕೇಂದ್ರಪ್ರಭುತ್ವವು ಇಟ್ಟುಕೊಂಡಿರುವುದು. ರಕ್ಷಣೆ, ವಿದೇಶೀಯ ವ್ಯವಹಾರಗಳು, ಧಾರ್ಮಿಕ ವಿಷಯಗಳು, ಕುಳಗಳ ಪ್ರದೇಶ ಇವುಗಳು ಕಾದಿಟ್ಟ ವಿಷಯಗಳಾಗಿವೆ. ೧೯೩೫ ನೆಯ ಶಾಸನದ ಪ್ರಕಾರ ಪ್ರಾಂತಗಳಲ್ಲಿ ಸ್ವಾಯತ್ತತೆಯು ಆಚರಣೆಯಲ್ಲಿ ಬಂದಿತು. ಆದರೆ ಮುಂದೆ ೧೯೩೯ರಲ್ಲಿ ಎರಡನೆಯ ಮಹಾಯುದ್ಧವು ಸಂಭವಿಸಿದ ಕಾರಣ ಈ ಶಾಸನದ ಎರಡನೆಯ ಅಂಶವಾದ ಸಂಘಟಿತ ರಾಜ್ಯಪದ್ಧತಿಯನ್ನು ಮುಂದರಿಸಲಾಯಿತು. ಆದುದರಿಂದ ಕೇಂದ್ರದಲ್ಲಿ ಸಂಘಟಿತ ಪ್ರಭುತ್ವವು ಅಸ್ತಿತ್ವದಲ್ಲಿ ಬರಲಿಲ್ಲ.

೧೯೪೦ ನೆಯ ಇಸ್ವಿಯ ಆಗಸ್ಟಿನ ವೈಸ್‌ರಾಯರ ನಿವೇದನವು ಕೇಂದ್ರ ಪ್ರಭುತ್ವದ ವಿಕಾಸದಲ್ಲಿ ಹೆಚ್ಚಿನ ಸಹಾಯ ಮಾಡಿತು. ಅದರ ಸಾರಾಂಶ ಕೆಳಗಿನಂತಿದೆ:—

ಅನ್ಯಾಯ ಆಕ್ರಮಣಗಳ ವಿರುದ್ಧ ನಡೆದಿರುವ ಜಾಗತಿಕ ಹೋರಾಟದ ಈ ಸಂಕಟ ಸಮಯದಲ್ಲಿ ನಮ್ಮ ಸಾಮಾನ್ಯ ಧ್ಯೇಯಗಳನ್ನು ಸಾಧಿಸಲು ಸಾಕಷ್ಟು ಸಹಾಯ ಮಾಡಬೇಕೆಂಬ ಹಿಂದುಸ್ಥಾನದ ವ್ಯಾಕುಲತೆ ವ್ಯಕ್ತವಾಗಿದೆ. ಅದಕ್ಕೆ ಇನ್ನೂ ಹೆಚ್ಚಿನ ಸಹಾಯ ಮಾಡಬೇಕೆಂಬ ಕುತೂಹಲವಿದೆ. ಸಾರ್ವಭೌಮರ ಪ್ರಭುತ್ವದವರು ಹಿಂದುಸ್ಥಾನದಲ್ಲಿ ರಾಷ್ಟ್ರೀಯ ಐಕ್ಯತೆಯು ಬೇಗನೆ ಪ್ರಾಪ್ತವಾಗಬೇಕೆಂದು ಯೋಚಿಸುತ್ತಿರುವರು. ಆದುದರಿಂದ ಈ ಕಾರ್ಯದಲ್ಲಿ ಹೆಚ್ಚಿನ ಸಹಾಯವಾಗುವುದು. ಇಂತಹ ಆಶಯದಿಂದ ಅವರು ಈ ಹೇಳಿಕೆಯನ್ನು ಪ್ರಕಟಿಸಲಿಕ್ಕೆ ನನಗೆ ಅಧಿಕಾರವನ್ನು ಕೊಟ್ಟಿರುವರು. ಹಿಂದುಸ್ಥಾನಕ್ಕೆ

ವಸಾಹತಿಯ ಯೋಗ್ಯತೆ ಕೊಡುವ ಸಾರ್ವಭೌಮರ ಪ್ರಭುತ್ವದ ಉದ್ದೇಶವನ್ನು ಪುನಃ ಧೃಡೀಕರಿಸಲಾಗುವುದು. ಗವರ್ನರ್ ಜನರಲ್ ಅವರ ಕಾರ್ಯ ಸಭೆಯನ್ನು ವಿಕಾಸಗೊಳಿಸಿ ರಾಜಕೀಯ ಪಂಗಡದ ಕೆಲವು ಪ್ರತಿನಿಧಿಗಳನ್ನು ಅದರಲ್ಲಿ ಸೇರಿಸಲಿಕ್ಕೆ ಅವರು ಈಗ ಸಿದ್ಧರಾಗಿದ್ದಾರೆ. ಇದಲ್ಲದೆ ಒಂದು ಸಮಾಲೋಚನೆ ಮಂಡಳಿಯನ್ನು ಸ್ಥಾಪಿಸಲಾಗುವುದು. ಯುದ್ಧವನ್ನು ಸಾಗಿಸಲಿಕ್ಕೆ ಈ ಸಭೆಗಳಿಗೆ ಹಿಂದುಸ್ಥಾನದ ಸಾರ್ವಜನಿಕ ಅಭಿಪ್ರಾಯದ ಸಹಾಯವು ಅವಶ್ಯವಾಗಿದೆ. ಆದುದರಿಂದ ನನ್ನ ಕಾರ್ಯ ಸಭೆಯಲ್ಲಿ ಸೇರಬೇಕೆಂದು ಕೆಲವು ಹಿಂದುಸ್ಥಾನದ ಪ್ರತಿನಿಧಿಗಳಿಗೆ ಆಮಂತ್ರಣ ಕೊಡಲಿಕ್ಕೆ ನನಗೆ ಅಧಿಕಾರ ಕೊಡಲಾಗಿದೆ. ಈ ಕೊಡುವಿಕೆಯಿಂದ ಹಿಂದುಸ್ಥಾನದ ರಾಜಕೀಯಪಂಗಡದವರು ಸಂತುಷ್ಟರಾಗಲಿಲ್ಲ.

೧೯೪೧ರಲ್ಲಿ ಅಟ್ಲಾಂಟಿಕ್ ಅಧಿಕಾರಪತ್ರವು (Atlantic charter) ಪ್ರಸಿದ್ಧವಾಯಿತು. ಈ ಪ್ರಕಟನೆಯು ಹಿಂದೀಯರಲ್ಲಿ ಒಂದು ಹೊಸ ಸ್ಫೂರ್ತಿಯನ್ನು ಹುಟ್ಟಿಸಿತು. ಯಾಕೆಂದರೆ ಆ ಅಧಿಕಾರ ಪತ್ರದಲ್ಲಿ ರಾಷ್ಟ್ರಗಳ ಸ್ವಯಂನಿರ್ಣಯತತ್ವದಬಗ್ಗೆ ಆಶ್ವಾಸನ ಕೊಡಲಾಗಿತ್ತು. ತಮ್ಮನ್ನು ಆಳುವ ಪ್ರಭುತ್ವದ ರಚನೆಯನ್ನು ಮನಬಂದಂತೆ ಮಾಡಿಕೊಳ್ಳುವ ಹಕ್ಕು ಎಲ್ಲ ಜನತೆಗೆ ಇರುವುದೆಂದು ಅದರಲ್ಲಿ ಹೇಳಿದೆ. ಇದಲ್ಲದೆ ಪರರ ಬಲಾತ್ಕಾರದಿಂದ ಈ ಹಕ್ಕನ್ನು ಕಳೆದು ಕೊಂಡ ಜನರಿಗೆ ಆಧಿಪತ್ಯ ಮತ್ತು ಸ್ವರಾಜ್ಯಗಳು ಪುನಃ ಪ್ರಾಪ್ತ ವಾಗುವಂತೆ ನೋಡಿ ಕೊಳ್ಳುತ್ತೇವೆಂದು ನಿರೂಪಿಸಲಾಗಿತ್ತು. ಈ ಅಧಿಕಾರ ಪತ್ರ ಹಿಂದುಸ್ಥಾನಕ್ಕೆ ಅನ್ವಯಿಸುವುದೋ ಎಂದು ಚರ್ಚಿಲ್ಲ ಅವರಿಗೆ ಕೇಳಿದಕ್ಕೆ ಶತ್ರುಗಳಿಂದ ಆಕ್ರಮಿಸಲ್ಪಟ್ಟ ದೇಶಗಳಿಗೆ ಮಾತ್ರ ಅದು ಸಂಬಂಧಪಟ್ಟಿದೆ ಎಂದು ಹೇಳಿ ತಪ್ಪಿಸಿ ಕೊಳ್ಳಲಿಕ್ಕೆ ಯತ್ನ ಮಾಡಿದರು. ಆದರೆ

ಈ ಅಧಿಕಾರ ಪತ್ರವನ್ನು ಬರೆಯುವುದರಲ್ಲಿ ಅವರ ಸಹಕಾರಿ ಯಾಗಿದ್ದ ಮಿ. ರೋಜವೆಲ್ಟ ಅವರು ಅದನ್ನು ವ್ಯಾಪಕ ಅರ್ಥದಲ್ಲಿ ಉಪಯೋಗಿಸಿ ಎಲ್ಲ ರಾಷ್ಟ್ರಗಳಿಗೂ ಈ ಘೋಷಣೆ ಅನ್ವಯಿಸುವುದೆಂದು ಅರ್ಥಾನುವಾದ ಮಾಡಿದರು. ಈ ಬಗ್ಗೆ ಲಾರ್ಡ್ ಲಿನ್‌ಲ್ಲಿಥ್‌ಗೋ ಅವರು ತಮ್ಮ ಆಗಸ್ಟಿನ ಕೊಡುವಿಕೆಯಲ್ಲಿ ಈ ಅಧಿಕಾರ ಪತ್ರದ ಸೂಕ್ಷ್ಮ ಅಂಶಗಳು ಇರುವುವೆಂದು ಹೇಳಿದರೆ ಅಮೇರಿಯುವುರು ಒಂದು ಹೆಜ್ಜೆ ಮುಂದೆ ಹೋಗಿ ಈ ಪತ್ರದ ತತ್ವಗಳಿಗನುಸರಿಸಿಯೇ ಹಿಂದುಸ್ಥಾಪದಲ್ಲಿ ಬ್ರಿಟಿಷ್ ನೀತಿ ಇರುವುದೆಂದು ಸಮರ್ಥನೆ ಮಾಡಿದರು.

ಸಾರಾಂಶ ವೇನೆಂದರೆ ಅಟ್ಲಾಂಟಿಕ್ ಮಹಾ ಪತ್ರದ ಬಗ್ಗೆ ಸಾಕ್ಷಿ ಮಾತ್ರ ಸ್ವತಂತ್ರ ರಾಷ್ಟ್ರಗಳು ಎಷ್ಟು ಹೆಮ್ಮೆಪಟ್ಟರೂ ಸ್ವಯಂ ನಿರ್ಣಯತತ್ವಕ್ಕನುಸರಿಸಿ ಪ್ರಭುತ್ವವನ್ನು ರಚಿಸಿ. ಕೊಳ್ಳುವ ಸಂಧಿ ಹಿಂದುಸ್ಥಾನಕ್ಕೆ ಪ್ರಾಪ್ತವಾಗಲಿಲ್ಲ.

೧೯೪೨ ರಲ್ಲಿ ಜಪಾನಿನ ಆಕ್ರಮಣದ ಅಂಜಿಕೆ ಹೆಚ್ಚಿದಂತೆ ಇಂಗ್ಲಂಡದ ರಾಜಕಾರಣಿಗಳಿಗೆ ಹಿಂದುಸ್ಥಾನದ ಬಗ್ಗೆ ಹೆಚ್ಚುವ್ಯಾಕುಲತೆ ಹುಟ್ಟಬಾರಂಭಿಸಿತು. ರಾಜ್ಯಾಧಿಕಾರವನ್ನು ಕೆಲವು ಮಟ್ಟಿಗೆಯಾದರೂ ಹಿಂದೀಯರಿಗೊಪ್ಪಿಸುವುದವಶ್ಯವೆಂದು ತಿಳಿದು ಯುದ್ಧ ಕಾಲವ ಮಂತ್ರಿಮಂಡಳವು ಸಮಾಲೋಚನೆ ಮಾಡಿತು. ಮಾರ್ಚ ತಿಂಗಳ ೧೧ ನೆಯ ದಿನಾಂಕದಲ್ಲಿ ಇಂಗ್ಲೆಂಡಿನ ಮುಖ್ಯ ಮಂತ್ರಿಗಳು ಈ ಬಗ್ಗೆ ಘೋಷಣೆ ಮಾಡಿದರು. ಮಿತ್ರ ರಾಷ್ಟ್ರಗಳ ಯುದ್ಧ ಪ್ರಯತ್ನದಲ್ಲಿ ಸಹಾಯ ಸಹಾನುಭೂತಿ ಗಳನ್ನು ಪಡೆಯಲಿಕ್ಕೆ, ಹಿಂದುಸ್ಥಾನದ ರಾಜಕೀಯ ಪರಿಸ್ಥಿತಿಯನ್ನನುಲಕ್ಷಿಸಿ ಮಂತ್ರಿ ಮಂಡಳವು ಕೆಲವು ಸೂಚನೆ ಗಳನ್ನೂ ಸಿದ್ಧಪಡಿಸಿರುವುದು. ಅವುಗಳೊಂದಿಗೆ ಸರ್. ಸ್ಟ್ಯಾಫೋರ್ಡ್ ಕ್ರಿಪ್ಸರವರು

ಬ್ರಿಟಿಷ್ ಪ್ರಭುತ್ವದ ಪರವಾಗಿ ರಾಜಕೀಯ ಸಂಧಾನ ಮಾಡಲು ಹಿಂದುಸ್ಥಾನಕ್ಕೆ ಹೋಗುವುದಾಗಿ ಹೇಳಿದರು,

ಕ್ರಿಪ್ಸರ ಯೋಜನೆಯ ಸಾರಾಂಶವು ಕೆಳಗಿನಂತಿದೆ:—

ಸಾರ್ವಭೌಮರ ಪ್ರಭುತ್ವದವರು ಹಿಂದುಸ್ಥಾನದ ಭವಿತವ್ಯದ ಬಗ್ಗೆ ಕೊಟ್ಟ ವಚನಗಳ ಪೂರೈಕೆಗಾಗಿ ಹಿಂದುಸ್ಥಾನ ಮತ್ತು ಇಂಗ್ಲಂಡ್ ದೇಶಗಳಲ್ಲಿ ಹುಟ್ಟಿದ ವ್ಯಾಕುಲತೆಯನ್ನು ಕುರಿತು ವಿಚಾರ ಮಾಡಿ, ಶಕ್ಯವಿದ್ದ ಮಟ್ಟಿಗೆ ಬೇಗನೆ ಹಿಂದುಸ್ಥಾನದಲ್ಲಿ ಸ್ವರಾಜ್ಯ ಸ್ಥಾಪನೆಗೆ ಕೈಕೊಳ್ಳಬೇಕಾದ ಉಪಾಯಗಳನ್ನು ಸ್ಪಷ್ಟ ಮತ್ತು ನಿಶ್ಚಿತ ಶಬ್ದಗಳಲ್ಲಿ ಹೇಳಬೇಕೆಂದು ನಿಷ್ಕರ್ಷೆ ಮಾಡಿರುವರು. ಸಂಯುಕ್ತ ಸಾಮ್ರಾಜ್ಯದ ಸಂಗಡ ಸಂಬಂಧವನ್ನುಳಿಸಿಕೊಂಡು ಇನ್ನಿತರ ಸಾಮ್ರಾಜ್ಯಾಂತರ್ಗತ ಸ್ವರಾಜ್ಯಗಳಂತೆ, ಇಂಗ್ಲಂಡದ ಮಕುಟಕ್ಕೆ ಸಾಮಾನ್ಯ ರಾಜ ನಿಷ್ಠೆಯನ್ನು ಸಲ್ಲಿಸುತ್ತ, ಗ್ರಹ ಮತ್ತು ಪರರಾಷ್ಟ್ರೀಯ ವ್ಯವಹಾರ ಗಳಲ್ಲಿ ಯಾವ ಪ್ರಕಾರದಿಂದಲೂ ಅಧೀನವಾಗದೆ, ಇಂತಹ ಸ್ವರಾಜ್ಯ ಗಳಿಗೆ ಪ್ರತಿಯೊಂದು ವಿಷಯಗಳಲ್ಲಿ ಸಮಾನವಾಗಿರುವ ಅಧಿಕಾರವುಳ್ಳ ಹಿಂದುಸ್ಥಾನದ ಒಂದು ಸಂಘವನ್ನು ಸ್ಥಾಪಿಸುವುದು ಮುಖ್ಯ ಉದ್ದೇಶ.

ಮಹಾ ಯುದ್ಧವು ಮುಗಿದಮೇಲೆ ರಾಜ್ಯಾಧಿಕಾರವನ್ನು ಸಂಪೂರ್ಣವಾಗಿ ಹಿಂದೀಯರ ಸ್ವಾಧೀನ ಮಾಡುತ್ತೇವೆಂದು ಹೇಳಲಾಯಿತು. ಆ ಯೋಜನೆಯ ಐದನೆಯ ವಿಭಾಗದ ಪ್ರಕಾರ ಹೊಸ ವಿಧಾನವು ಸಿದ್ಧವಾಗುವ ತನಕ ಈ ಆಪತ್ತಿನ ಕಾಲದಲ್ಲಿ ಸಾರ್ವಭೌಮರ ಪ್ರಭುತ್ವದವರಿಗೆ ಜಗತ್ತಿನ ಯುದ್ಧ ಪ್ರಯತ್ನದ ಅಂಗವಾದ ಹಿಂದುಸ್ಥಾನದ ರಕ್ಷಣೆ, ನಿಯಂತ್ರಣ, ಮತ್ತು ಅದರ ಹೊಣೆಗಳನ್ನು ಹೊರುವುದು ಅವಶ್ಯವಾಗಿದೆ. ಹಿಂದೀ ಜನತೆಯ ಸಹಕಾರದಿಂದ ಸೈನಿಕ, ನೈತಿಕ, ಮತ್ತು

ಆರ್ಥಿಕ ಸೌಕರ್ಯಗಳನ್ನು ಕಲ್ಪಿಸಿ ಕೊಡುವ ಹೊಣೆ ಹಿಂದುಸ್ಥಾನದ ಪ್ರಭುತ್ವದ ಮೇಲಿರುವುದು. ಸಾರ್ವಭೌಮರ ಪ್ರಭುತ್ವದವರು, ಹಿಂದುಸ್ಥಾನದ ರಾಜಕೀಯ ಪಂಗಡಗಳ ಮುಖಂಡರಿಗೆ ತಮ್ಮ ದೇಶದ ಸಮಾಲೋಚನೆಯ ಸಭೆಯಲ್ಲಿ ಸೇರಲಿಕ್ಕೆ ಆಮಂತ್ರಣ ಕೊಡುವುದು.

ಕ್ರಿಪ್ಸರವರು ಹಿಂದುಸ್ಥಾನದ ಮುಖಂಡರೊಡನೆ ಸಂಧಾನ ನಡೆಸಿದರು. ಅವರ ಸೂಚನೆಗಳ ಪ್ರಕಾರ ನಿಜವಾದ ಅಧಿಕಾರವನ್ನು ಹಿಂದುಸ್ಥಾನದ ಸ್ವಾಧೀನ ಮಾಡಲು ಬ್ರಿಟಿಷ್ ಪ್ರಭುತ್ವವು ಸಿದ್ಧವಿಲ್ಲೆದು ವ್ಯಕ್ತವಾದ ಕಾರಣ ಆ ಸೂಚನೆಗಳನ್ನು ಕಾಂಗ್ರೆಸ್ಸು ಗ್ರಾಹ್ಯವಿಲ್ಲೆಂದು ನಿಷೇಧಿಸಿತು. ಹೀಗೆ ನಿರಾಕರಿಸಲಿಕ್ಕೆ ಎರಡು ಕಾರಣಗಳು. (೧) ರಕ್ಷಣೆ ಹಿಂದೀಯರ ಕೈಯ್ಯಲ್ಲಿ ಕೊಡಬೇಕೆಂದು ಕಾಂಗ್ರೆಸ್ ಕೇಳಿತು. ಯಾಕೆಂದರೆ ಈ ಸರ್ವತೋಮುಖ ಹೋರಾಟದಲ್ಲಿ ಇಂತಹ ಅಧಿಕಾರ ಪಡೆದರೆ ನಿಜವಾದ ಸಹಕಾರ ಹಿಂದೀಯರಿಂದ ಶಕ್ಯವಾಗುವುದು. ಯುದ್ಧ ಕೌಶಲ್ಯ, ಅದರ ವ್ಯವಹಾರಗಳ ನಿಯಂತ್ರಣ, ಸೈನ್ಯಕರ ಮಾರ್ಗ ದರ್ಶನ ಈ ವಿಷಯಗಳು ಪ್ರತ್ಯಕ್ಷವಾಗಿ ಮುಖ್ಯ ಸೇನಾಧಿಪತಿಯ ಅಧೀನಕ್ಕೆ ಕೊಟ್ಟರೂ ಕನಿಷ್ಟಪಕ್ಷಕ್ಕೆ ಯುದ್ಧದ ವಿಶಾಲವಾದ ನೀತಿಗಳನ್ನು ಹಿಂದೀಯರ ಕೈಯಲ್ಲಿ ಕೊಡಬೇಕೆಂದು, ಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದ ಮೌ|| ಆಜಾದರವರು ಕೇಳಿದರು. ಆದರೆ ರಕ್ಷಣೆಯ ಮಂತ್ರಿ ಪದವನ್ನು ಹಿಂದೀಯರಿಗೆ ಕೊಡಲು ಕ್ರಿಪ್ಸರು ಒಪ್ಪಿಕೊಂಡರೂ ಮುಖ್ಯ ಅಧಿಕಾರಗಳನ್ನು ಕೊಡಲಿಕ್ಕೆ ಸಿದ್ಧರಾಗಲಿಲ್ಲ. ರಕ್ಷಣೆಯ ಮಂತ್ರಿಗೆ ನಿಜವಾದ ಅಧಿಕಾರಗಳಿರಬೇಕೆಂದು ಕಾಂಗ್ರೆಸ್ಸು ಆಗ್ರಹ ತೊಟ್ಟಿತು. ಹಿಂದುಸ್ಥಾನದ ಸೈನಿಕ, ಆರ್ಥಿಕ, ಮತ್ತು ನೈತಿಕ ಬೆಂಬಲವನ್ನು ಇಂಗ್ಲಂಡು ಅಪೇಕ್ಷಿಸುವುದು. ಆದರೆ ಹಿಂದೀಯರಲ್ಲಿ ವಿಶ್ವಾಸ ಮಾಡಿ ರಕ್ಷಣದ ಅಧಿಕಾರ ಕೊಡಲು ಅದು ಸಿದ್ಧವಾಗಲಿಲ್ಲವೆಂದು ಆಗ ಹಿಂದೀಯರು ಭಾವಿಸಿದರು.

(೨) ವಾಯುಸ್‌ರಾಯ್ ಅವರ ವಿಶೇಷಾಧಿಕಾರ ಎರಡನೆಯ ಕಾರಣವು. ವಸಾಹತಿ ರಾಜ್ಯಗಳಲ್ಲಿರುವಂತೆ ವೈಧಾನಿಕ ಮುಖ್ಯರಾಗಿ ವೈಸ್‌ರಾಯರು ಇರುವರೆಂತಲೂ, ಸೂಚಿಸಿದ ಪ್ರಭುತ್ವ ನಿಜವಾದ ರಾಷ್ಟ್ರೀಯ ಪ್ರಭುತ್ವವಾಗುವುದೆಂದು ಕ್ರಿಪ್ಸರು ಮೊದಲು ಹೇಳಿದರು. ಆದರೆ ಮುಂದೆ ಅವರು ಅದರಂತೆ ನಡೆಯಲಿಲ್ಲ. ಮುಖ್ಯಸೇನಾಧಿಪತಿಯು ಸ್ನುಳಿದು ಪ್ರಭುತ್ವದ ಎಲ್ಲ ಮಂತ್ರಿಗಳು ಹಿಂದೀಯರಾಗಬೇಕೆಂಬ ಕಾಂಗ್ರೆಸ್ಸಿನ ಸೂಚನೆಗೆ ವೈಸ್‌ರಾಯರು ಒಪ್ಪಿಕೊಂಡರೆಂದು ಹೇಳಲಾಯಿತು. ಆದರೆ ಈ ಪ್ರಭುತ್ವದ ಅಧಿಕಾರಗಳಬಗ್ಗೆ ಮುಂದೆ ತೊಡಕು ಹುಟ್ಟಿತು. ೧೯೩೫ ನೆಯ ಶಾಸನದ ಪ್ರಕಾರ ಹಿಂದುಸ್ಥಾನದ ಕ್ಷೇಮ, ಶಾಂತತೆ, ಹಿತ, ಇವುಗಳಿಗೆ ಬಾಧೆ ಉಂಟಾಗುವ ಪ್ರಸಂಗ ಒದಗಿದರೆ ವಾಯ್ಸರಾಯರು ಕಾರ್ಯಸಭೆಯವಿರುದ್ಧ ವಿಶೇಷಾಧಿಕಾರ ಉಪಯೋಗಿಸ ಬಲ್ಲರು. ರಾಷ್ಟ್ರಭಕ್ತರಿಗೆ ಈ ವಿಷಯವು ರುಚಿಸಲಿಲ್ಲ. ಹಿಂದೀಯರಕಿಂತಲೂ ಈ ದೇಶದ ಕ್ಷೇಮ, ಶಾಂತತೆ, ಹಿತಗಳ ರಕ್ಷಣೆ ಪರಕೀಯರಾದ ವೈಸ್‌ರಾಯರು ಬಗೆಯುವರೆಂಬುದು ಸಮಂಜಸವಾಗಲಾರದೆಂದು ಅವರು ಹೇಳಿದರು. ಸಂಪೂರ್ಣ ಅಧಿಕಾರವುಳ್ಳ ಪ್ರಭುತ್ವವನ್ನು ಸ್ಥಾಪಿಸಲಿಕ್ಕೆ ಪಾರ್ಲಿಮೆಂಟಿನ ಅಂಗೀಕಾರ ಬೇಕಾಗುವುದು. ಈ ಯುದ್ಧಕಾಲದಲ್ಲಿ ಅದು ಸಾಧ್ಯವಿಲ್ಲೆಂದು ಕ್ರಿಪ್ಸರವರು ಹೇಳಿದರು. ಕಾಂಗ್ರೆಸ್ಸು ಅಧಿಕಾರವಿಲ್ಲದ ಪ್ರಭುತ್ವವನ್ನು ಸ್ವೀಕರಿಸಲಿಕ್ಕೆ ಒಪ್ಪಲಿಲ್ಲ. ಸ್ವತಂತ್ರವಾದ ಮತ್ತು ಸಂಪೂರ್ಣ ಅಧಿಕಾರವುಳ್ಳ ಮಂತ್ರಿಮಂಡಳ ಬೇಕೆಂತಲೂ ಅದರ ಸದಸ್ಯರು ವೈಧಾನಿಕಪ್ರಭುತ್ವದ ಮಂತ್ರಿಗಳಂತೆ ರಾಜತಂತ್ರವನ್ನು ನಡೆಸಲು ಸಮರ್ಥರಾಗಿರಬೇಕೆಂತಲೂ ಕಾಂಗ್ರೆಸ್ಸು ಆಗ್ರಹದಿಂದ ಕೇಳಿತು ಸಾರಾಂಶ, ಕ್ರಿಪ್ಸರವರ ಸಂಧಾನ ನಿಷ್ಫಲವಾದುದರಿಂದ ಅವರು ಇಂಗ್ಲಂಡಕ್ಕೆ ಮರಳಿದರು ಮತ್ತು ಹಿಂದುಸ್ಥಾನದ ರಾಜಕೀಯಮುಗ್ಗಟ್ಟು

ಹಾಗೆ ಉಳಿಯಿತೆಂಬುದು ಎಲ್ಲರಿಗೆ ತಿಳಿದ ಸಂಗತಿ.

## ಕೂಪ್ಲಂಡ ಅವರ ಯೋಜನೆ.

ಕ್ರಿಪ್ಸರವರ ಸೂಚನೆಗಳು ನಿಷ್ಫಲವಾದಮೇಲೆ "ಹಿಂದುಸ್ಥಾನದ ಘಟನಾತ್ಮಕ ಸಮಸ್ಯೆ"ಎಂಬ ವಿದ್ವತ್ತಾಪೂರ್ಣಗ್ರಂಥವನ್ನು ಇಂಗ್ಲಂಡಿನಲ್ಲಿ ಪ್ರೊಫೆಸರ್. ಕೂಪ್ಲೆಂಡ್ ಅವರು ಪ್ರಕಟಿಸಿದರು. ಅದು ಕೂಪ್ಲೆಂಡ ಯೋಜನೆ ಎಂದು ಪ್ರಸಿದ್ಧವಾಗಿದೆ. ಈ ಯೋಜನೆಯು ಅಧಿಕಾರವುಳ್ಳ ದಾಗದಿದ್ದರೂ ಅದು ಕೇವಲ ಗ್ರಾಂಥಿಕ ಬೆಲೆಯುಳ್ಳದೆಂದು ಯಾರೂ ಹೇಳ ಲಾರರು. ಅದರ ಪ್ರಚಾರವನ್ನು ನೋಡಿದರೆ ಅದಕ್ಕೆ ಪ್ರಭುತ್ವದ ಬೆಂಬಲ ವಿತ್ತೆಂದು ಊಹಿಸಬಹುದು. ಹಿಂದುಸ್ಥಾನದಮೇಲೆ ಬ್ರಿಟಿಷ್ರ ಹಿಡಿತ ವನ್ನು ಮತ್ತಷ್ಟು ಬಲಪಡಿಸುವುದರಲ್ಲಿ ಅದು ಸಹಾಯ ಮಾಡುವುದೆಂದು ಕೆಲವು ವೈಧಾನಿಕ ಪಂಡಿತರು ಹೇಳುವರು. ಕೆಲವು ಅಂಶಗಳಲ್ಲಿ ಕ್ರಿಪ್ಸರ ಯೋಜನೆಗಿಂತಲೂ ಔದಾರ್ಯದಲ್ಲಿ ಕಡಮೆಯೆಂದು ಮತ್ತುಕೆಲವರು ಹೇಳುವರು. ಪ್ರಾದೇಶತ್ವವೇ ಈ ಯೋಜನೆಯ ಉದ್ದೇಶ. ಹಿಂದುಸ್ಥಾ ನವನ್ನು ನಾಲ್ಕು ಪ್ರದೇಶಗಳಲ್ಲಿ ವಿಂಗಡಿಸುವುದೇ ಅವರ ಯೋಜನೆಯ ಗುರಿ. ಮಹಾನದಿಗಳ ಪಾತ್ರೆಗಳ ತಳಹದಿಯ ಮೇಲೆ ದೇಶದ ವಿಭಾಗ ಮಾಡಬೇಕೆಂದು ಅವರು ಹೇಳುವರು.

(೧) ಸಿಂಧೂನದಿಯ ಪ್ರದೇಶದಲ್ಲಿ, ಸಿಂಧುಪ್ರಾಂತ, ಗಡಿನಾಡು, ಅಂಬಾಲಾ ಜಿಲ್ಹೆಯನ್ನು ಬಿಟ್ಟು ಪಂಜಾಬ, ಬಲುಚಿಸ್ಥಾನ ಕಾಶ್ಮೀರ ಮತ್ತು ರಜಪೂತಾನದ ಬಹುಭಾಗ ಸೇರುವುದು.

(೨) ಗಂಗಾನದಿ ಪ್ರದೇಶದಲ್ಲಿ ಸಂಯುಕ್ತಪ್ರಾಂತ, ಬಿಹಾರ್, ಮಧ್ಯಪ್ರಾಂತದ ಕೆಲವು ಭಾಗ, ಓರಿಸ್ಸಾ, ಇವುಗಳ ಸಮಾವೇಶವಾಗು ವುದು.

(೩) ನದಿಮುಖಪ್ರದೇಶ :- ಆಸಾಮ್, ಬಂಗಾಲ (ಬರದ್ವಾನವನ್ನುಳಿದು)

(೪) ಪಶ್ಚಿಮ ಘಟ್ಟಗಳಲ್ಲಿ ಹುಟ್ಟುವ ನದಿಗಳ ದಕ್ಷಿಣಪ್ರದೇಶ

ಪ್ರತಿಯೊಂದು ಪ್ರದೇಶಕ್ಕೆ ಸ್ವತಂತ್ರ ಪ್ರಭುತ್ವವನ್ನು ಕಲ್ಪಿಸಿಕೊಡಬೇಕೆಂದು ಅವರು ಹೇಳುವುರು. ಈ ಯೋಜನೆಯ ಮೇರೆಗೆ ಆಲೋಚಿಸಿದ ಮುಃಖ್ಯಪ್ರಭುತ್ವವು ಕೇವಲ ಕಾರ್ಯಚಿಂತಕ ಕೇಂದ್ರಪ್ರಭುತ್ವವಾಗುವುದು. ಈ ಪ್ರಭುತ್ವದ ಮಂತ್ರಿಗಳು, ರಕ್ಷಣ, ವಿದೇಶೀಯ ವ್ಯವಹಾರ, ಸುಂಕ, ನಾಣ್ಯಖಾತೆಗಳಮೇಲೆ ನಿಯಂತ್ರಣ ಮಾಡುವರು. ಹಿಂದುಸ್ಥಾನದ ಐಕ್ಯತೆಯನ್ನು ಕಾಪಾಡಿಕೊಂಡು ಮುಸಲ್ಮಾನರಿಗೆ ಸಮಾಧಾನಪಡಿಸುವುದೇ ಇದರ ಉದ್ದೇಶವೆಂದು ಕೂಪ್ಲೆಂಡ ಅವರು ಹೇಳುವರು. ಅಖಂಡ ಹಿಂದುಸ್ಥಾನದ ಒಂದು ಸಂಘಟಿತರಾಜ್ಯ ಮತ್ತು ಪಾಕಿಸ್ತಾನದ ಸಲುವಾಗಿ ಮಾಡಬೇಕಾದ ವಿಭಾಗ, ಇವುಗಳಲ್ಲಿ ಇದು ಮಧ್ಯಮ ಉಪಾಯವೆಂದು ಹೇಳುವರು. ಈ ಯೋಜನೆಯ ಗುಣದೋಷಗಳಬಗ್ಗೆ ಹಿಂದುಸ್ಥಾನದ ವೈಧಾನಿಕ ಪಂಡಿತರು ವಿಸ್ತಾರವಾಗಿ ಚರ್ಚಿಸಿರುವರು. ಕೂಪ್ಲೆಂಡ್ ಅವರ ಯೋಜನೆಯ ಪ್ರಕಾರ ಹಿಂದುಸ್ಥಾನದ ಕೇಂದ್ರಪ್ರಭುತ್ವವು ಬಲಿಷ್ಠವಾಗದೆ, ಒಂದು ಅಂತರಪ್ರಾಂತೀಯ ಸಂಸ್ಥೆಯಾಗುವುದೆಂದು ವಿಮರ್ಶಕರು ಹೇಳುವರು.

## ವೇವೆಲ್ ಅವರ ಯೋಜನೆ.

೧೯೪೫ನೆಯ ಇಸ್ವಿಯಲ್ಲಿ ಎರಡನೆಯ ಮಹಾಯುದ್ಧವು ಮುಗಿಯಿತು. ಆ ವರ್ಷ ಬೇಸಿಗೆಯಕಾಲದಲ್ಲಿ ವೈಸ್‌ರಾಯ್ ಅವರು ಇಂಗ್ಲಂಡಕ್ಕೆ ಹೋಗಿ ಅಲ್ಲಿಯ ಪ್ರಭುತ್ವದವರೊಡನೆ ಹಿಂದುಸ್ಥಾನದ ರಾಜಕೀಯ

ಪರಿಸ್ಥಿತಿಯ ಬಗ್ಗೆ ಸಮಾಲೋಚನೆ ಮಾಡಿದರು. ಆಮೇಲೆ ಹಿಂದುಸ್ಥಾನದ ರಾಜಕೀಯ ಪರಿಸ್ಥಿತಿಯಲ್ಲಿ ಸೌಲಭ್ಯವನ್ನು ಹುಟ್ಟಿಸಲು ಸಾರ್ವಭೌಮರ ಪ್ರಭುತ್ವದ ಕೆಲವು ಸೂಚನೆಗಳೊಂದಿಗೆ ಹಿಂದುಸ್ಥಾನಕ್ಕೆ ತಿರುಗಿಬಂದು ಘೋಷಣೆಮಾಡಿದರು. ಅದರ ಸಾರಾಂಶ :— ‡‡ ವಿಧಾನದ ರಚನಾ ಸಮಿತಿಯನ್ನು ಆದಷ್ಟುಬೇಗನೆ ಕೂಡಿಸುವುದು ಸಾರ್ವಭೌಮರ ಪ್ರಭುತ್ವದ ಉದ್ದೇಶ. ಈ ಸಿದ್ಧತೆಯ ಕಾಲದಲ್ಲಿ ಹಿಂದುಸ್ಥಾನದ ಪ್ರಭುತ್ವವನ್ನು ನಡೆಸುವುದಲ್ಲದೆ ಮಹತ್ವದ ಆರ್ಥಿಕ ಮತ್ತು ಸಾಮಾಜಿಕ ಸಮಸ್ಯೆಗಳನ್ನು ಬಿಡಿಸಬೇಕಾಗಿದೆ. ಜಗತ್ತಿನ ಮುಂಬರುವ ಹೊಸ ವ್ಯವಸ್ಥೆಯ ಕಾರ್ಯಕಲಾಪಗಳಲ್ಲಿ ಸಂಪೂರ್ಣವಾಗಿ ಭಾಗವಹಿಸಬೇಕು. ಪ್ರಾಂತೀಯ ಆಯ್ಕೆಯ ಫಲಿತಾಂಶ ತಿಳಿದಕೂಡಲೇ ಹಿಂದುಸ್ಥಾನದ ಮುಖ್ಯಪಂಗಡಗಳ ಸಹಾಯವನ್ನು ಪಡೆದು ಕಾರ್ಯಸಭೆಯ ರಚನೆಗಾಗಿ ಬೇಕಾಗುವ ಉಪಾಯಗಳನ್ನು ಕೈಕೊಳ್ಳುವುದಕ್ಕೆ ಸಾರ್ವಭೌಮರ ಪ್ರಭುತ್ವದವರು ನನಗೆ ಅಧಿಕಾರ ಕೊಟ್ಟಿರುವರು. ಅವು ಈ ಮುಂದೆ ವಿವರಿಸಲಾಗಿದೆ.

(೧) ವ್ಯವಸ್ಥಿತ ರಾಜಕೀಯ ಅಭಿಮತದ ಹೆಚ್ಚಿನ ಪ್ರತಿನಿಧಿಗಳಿಂದೊಡಗೂಡಿದ ಒಂದು ಹೊಸಕಾರ್ಯ ಸಭೆಯನ್ನು ನಿರ್ಮಾಣ ಮಾಡುವುದು.

(೨) ಸೂಚಿಸಲ್ಪಟ್ಟ ಹೊಸಪ್ರಭುತ್ವದಲ್ಲಿ ಸವರ್ಣ ಹಿಂದುಗಳು ಮತ್ತುಮುಸ್ಲಿಮರು ಇವರ ಸಮಾನ ಪ್ರತಿನಿಧಿಗಳನ್ನು ಸೇರಿಸಲಾಗುವುದು.

(೩) ವೈಸ್‌ರಾಯರು ಮತ್ತು ಮುಖ್ಯಸೇನಾಧಿಪತಿಗಳನ್ನುಳಿದು ಇದು ಸಂಪೂರ್ಣ ಹಿಂದೀಯರ ಸಭೆಯಾಗುವುದು.

---

‡‡ ರಾಜನೀತಿಶಾಸ್ತ್ರದ ಪರಿಶಿಷ್ಟ (ಅ) ಪುಟ ೧೬೫

(೪) ವಿದೇಶೀಯ ವ್ಯವಹಾರಗಳ ರಾಜತಂತ್ರದ ಖಾತೆ (ಕೈಪಟ್ಟಿಗೆ) ಹಿಂದೀಯ ಸದಸ್ಯನಿಗೆ ಒಪ್ಪಿಸಲಾಗುವದು.

(೫) ಬ್ರಿಟಿಷರ ವ್ಯಾಪಾರ ಮತ್ತು ಇನ್ನಿತರ ಹಿತಗಳ ರಕ್ಷಣೆಗಾಗಿ ಹಿಂದುಸ್ತಾನದಲ್ಲಿ ಉನ್ನತಾಧಿಕಾರಿಯ ನಿಯೋಜನೆ ಮಾಡಲಾಗುವುದು.

(೬) ಇಂದಿನ ಘಟನೆಯ ಚೌಕಟ್ಟಿನಲ್ಲಿ ಈ ಸಭೆ ಕೆಲಸ ಮಾಡಬೇಕು.

ಸಿಮ್ಲಾ ಪರಿಷತ್ತು.

ಆ ಮೇಲೆ ೧೯೪೫ ರ ಜೂನ್ ತಿಂಗಳ ೨೫ ನೆಯ ದಿನಾಂಕದಲ್ಲಿ ಹೊಸ ಕಾರ್ಯ ಸಭೆಯನ್ನು ರಚಿಸುವ ಉದ್ದೇಶದಿಂದ ವೈಸ್‌ರಾಯರು ಸಿಮ್ಲಾದಲ್ಲಿ ಒಂದು ಪರಿಷತ್ತನ್ನು ಕರೆದರು. ಈ ಪರಿಷತ್ತಿಗೆ ಎಲ್ಲ ರಾಜಕೀಯ ಪಂಗಡದ ಸದಸ್ಯರು, ಕೇಂದ್ರ ಶಾಸನ ಸಭೆ ಮತ್ತು ರಾಜ್ಯಸಭೆಗಳ ಮುಂದಾಳುಗಳು, ಪ್ರಾಂತಗಳ ಮುಖ್ಯ ಮಂತ್ರಿಗಳು ಮಹಾತ್ಮಾ ಗಾಂಧಿ ಮತ್ತು ಮಿಸ್ಟರ್ ಜಿನ್ನಾ ಅವರು ಪ್ರತಿನಿಧಿಗಳಾಗಿ ಹೋಗಿದ್ದರು. ತಮ್ಮ ಆರಂಭ ಭಾಷಣದಲ್ಲಿ "ಇದು ಘಟನಾತ್ಮಕ ನಿಶ್ಚಯವಲ್ಲ. ಹಿಂದುಸ್ಥಾನದ ತೊಡಕಿನ ಸಮಸ್ಯೆಗಳ ಅಂತಿಮ ನಿರ್ಣಯವಲ್ಲ. ಈ ಪ್ರಯತ್ನ ಯಶಸ್ವಿಯಾದರೆ ರಾಜಕೀಯ ಒಡಂಬಡಿಕೆ ಸುಲಭವಾಗುವುದು" ಎಂದು ವೈಸ್‌ರಾಯರು ಹೇಳಿದರು.

ರಾಷ್ಟ್ರಸಭೆಯಾದ ಕಾಂಗ್ರೆಸ್ಸು ಈ ಕಾರ್ಯ ಸಭೆಗೆ ೧೫ ಜನರ ಹೆಸರುಗಳನ್ನು ಸೂಚಿಸಿತು. ಮುಸ್ಲಿಂಲೀಗು ಹೆಸರುಗಳನ್ನು ಸೂಚಿಸುವದಕ್ಕಿಂತ ಮುಂಚೆ ಕೆಲವು ವಿಷಯಗಳ ಬಗ್ಗೆ ಆಶ್ವಾಸನ ಕೊಡ

ಬೇಕೆಂದು ವೈಸ್‌ರಾಯರನ್ನು ಕೇಳಿಕೊಂಡಿತು. ರಾಜಕೀಯ ವಿಷಯ ಗಳ ಚರ್ಚೆ ಹಲವಾರು ದಿವಸಗಳ ಪರ್ಯಂತ ನಡೆಯಿತು. ೧೪ ನೆಯ ಜುಲೈಕ್ಕೆ ಕಾರ್ಯ ಸಭೆಯ ಸದಸ್ಯರ ಸ್ಥಾನಗಳ ಬಗ್ಗೆ ಅಸಮ್ಮತಿಯು ಹುಟ್ಟಿದ ಕಾರಣ ಒಪ್ಪಂದವಾಗಲಿಲ್ಲ. ಆದುದರಿಂದ ಈ ಪರಿಷತ್ತು ನಿಷ್ಫಲವಾಯಿತು ಎಂದು ವೈಸ್‌ರಾಯರು ಸಾರಿದರು. "ಈ ವಿಷಯ ದಲ್ಲಿ ನನಗಿಂತಲೂ ಹೆಚ್ಚಿನ ಖೇದ ಯಾರಿಗೂ ಆಗಿರಲಿಕ್ಕಿಲ್ಲವೆಂದು ಭಾವಿಸುತ್ತೇನೆ. ನಿಷ್ಫಲತೆಯ ಹೊಣೆ ನನ್ನಮೇಲೆ ಇದೆ. ನಾನು ಯಾವ ಪಂಗಡದವರಿಗೂ ದೋಷಕೊಡುವುದಿಲ್ಲ" ಎಂದು ಅವರು ಹೇಳಿದರು.

## ವೈಸ್‌ರಾಯರ ಎರಡನೆಯ ಪ್ರಯತ್ನ.

ಮಹಾಯುದ್ಧವು ಮುಗಿದಮೇಲೆ ಇಂಗ್ಲಂಡಿನಲ್ಲಿ ಕೂಲಿಕಾರ ಪಕ್ಷದವರು ಅಧಿಕಾರಾರೂಢರಾದರು. ಹಿಂದುಸ್ಥಾನದ ರಾಜಕೀಯ ಮುಗ್ಗಟ್ಟನ್ನು ಬಿಡಿಸಬೇಕೆಂಬ ಆತುರ ಅವರಲ್ಲಿ ಹುಟ್ಟಿತು, ವೈಸ್ ರಾಯರು ೧೯೪೫ ನೆಯ ಅಗಸ್ಟ ೨೬ ನೆಯ ದಿನಾಂಕದಲ್ಲಿ, ಕೇಂದ್ರದಲ್ಲಿ ನಡುಗಾಲ ಪ್ರಭುತ್ವವನ್ನು ಸ್ಥಾಪಿಸುವ ಪ್ರಯತ್ನಕ್ಕಾಗಿ ಸಾರ್ವಭೌಮರ ಪ್ರಭುತ್ವದವರೊಡನೆ ಸಮಾಲೋಚನೆ ಮಾಡಲು, ಇಂಗ್ಲಂಡಕ್ಕೆ ತೆರ ಳಿದರು. ಅವರೊಡನೆ ವಿಚಾರ ವಿನಿಮಯ ಮಾಡಿ ಸೆಪ್ಟೆಂಬರ ೧೬ ಕ್ಕೆ ಹಿಂತಿರುಗಿದರು. ೧೯ನೆಯ ಸೆಪ್ಟೆಂಬರದ ದಿನ ಆಕಾಶವಾಣಿಯ ಮೂಲಕ ಅವರು ಕೆಳಗಿನಂತೆ ಹೇಳಿದರು:—

"ಸಾರ್ವಭೌಮರ ಪ್ರಭುತ್ವದವರೊಡನೆ ನಾನು ಲಂಡನ್ನಿನಲ್ಲಿ ಚರ್ಚೆ ಮಾಡಿಬಂದಿರುವೆನು. ಈ ಮುಂದಿನಂತೆ ತಿಳಿಸಲು ಅವರು ನನಗೆ ಅಧಿಕಾರ ಕೊಟ್ಟಿರುವರು. ಪಾರ್ಲಿಮೆಂಟಿನ ಅಧಿವೇಶನವು ಆರಂಭ ವಾದಾಗ ಸಾರ್ವಭೌಮರ ಭಾಷಣದಲ್ಲಿ ಸೂಚಿಸಿದಂತೆ ಹಿಂದುಸ್ಥಾನ

ದಲ್ಲಿ ಸ್ವರಾಜ್ಯಸ್ಥಾಪನೆ ಆಗುವುದರಲ್ಲಿ ಹೆಚ್ಚಿನ ಸಹಾಯ ಮಾಡ ಬೇಕೆಂದು ಸಾರ್ವಭೌಮರ ಪ್ರಭುತ್ವದವರು ನಿಶ್ಚಯಿಸಿರುವರು. ಈ ಕೆಲಸದಲ್ಲಿ ಕೈಕೊಳ್ಳಬೇಕಾದ ಉಪಾಯುಗಳ ಬಗ್ಗೆ ನನ್ನೊಡನೆ ಅವರು ಸಮಾಲೋಚನೆ ಮಾಡಿರುವರು. ಪ್ರಾಂತಗಳ ಶಾಸನ ಸಭೆಗಳ ಸಲು ವಾಗಿ ಆಯ್ಕೆಗಳು ಆದಕೂಡಲೇ ಎಲ್ಲ ಪ್ರಾಂತಗಳಲ್ಲಿ ಮುಖಂಡರು ಮಂತ್ರಿಪದದ ಹೊಣೆಯನ್ನು ವಹಿಸುವರೆಂದು ಆ ಪ್ರಭುತ್ವದವರು ಮನಃಪೂರ್ವಕವಾಗಿ ಬಯಸುತ್ತಾರೆ. ಆದಮುಟ್ಟಿಗೆ ಬೇಗನೆ ಘಟನಾ ಸಮಿತಿಯನ್ನು ಕೂಡಿಸಬೇಕೆಂದು ಅವರ ಉದ್ದೇಶವಿದೆ. ಈ ಬಗ್ಗೆ ಶಾಸನ ಸಭೆಯ ಪ್ರತಿನಿಧಿಗಳೊಡನೆ ಚರ್ಚಿಸಲು ಅವರು ನನಗೆ ಅಧಿ ಕಾರ ಕೊಟ್ಟಿರುವರು. ಈ ಸಿದ್ಧತೆಯ ಕಾಲದಲ್ಲಿ ಹಿಂದುಸ್ಥಾನದ ಪ್ರಭುತ್ವವನ್ನು ಸಾಗಿಸಬೇಕಾಗಿದೆ. ಆರ್ಥಿಕ, ಸಾಮಾಜಿಕ ಪ್ರಶ್ನೆ ಗಳನ್ನು ಬಿಡಿಸಬೇಕಾಗಿದೆ. ಇದಲ್ಲದೆ ಜಾಗತಿಕ ಹೊಸ ವ್ಯವಸ್ಥೆಯ ನಿರ್ಮಾಣದಲ್ಲಿ ಹಿಂದುಸ್ಥಾನಕ್ಕೆ ತನ್ನ ಸೇವೆಯನ್ನು ಸಲ್ಲಿಸಬೇಕಲ್ಲವೆ? ಆದುದರಿಂದ ಪ್ರಾಂತೀಯ ಆಯ್ಕೆಗಳ ಫಲಿತಾಂಶ ತಿಳಿದಕೂಡಲೆ ರಾಜಕೀಯ ಮುಖ್ಯಪಂಗಡಗಳಿಂದ ಸಹಾಯ ಪಡೆಯುವ ಒಂದು ಕಾರ್ಯಸಭೆಯನ್ನು (ಪ್ರಭುತ್ವವನ್ನು) ರಚಿಸಲು ಸಾರ್ವಭೌಮರ ಪ್ರಭುತ್ವದವರು ನನಗೆ ಅಧಿಕಾರ ಕೊಟ್ಟಿದ್ದಾರೆ.

## ಪಾರ್ಲಿಮೆಂಟಿನ ಘೋಷಣೆ.

ಭಾರತದ ಸಚೀವದರಾದ ಲಾರ್ಡ ಪೆಥಿಕ್‌ಲಾರೆನ್ಸರವರು ಕೆಳಗಿನಂತೆ ಘೋಷಣೆ ಮಾಡಿದರು:—

"ಪಾರ್ಲಿಮೆಂಟಿನ ಸದಸ್ಯರು ಹಿಂದುಸ್ಥಾನದ ರಾಜಕೀಯ ಪ್ರಮುಖರ ಅಭಿಮತವನ್ನು ಸಮಕ್ಷ ತಿಳಿದುಕೊಳ್ಳುವುದು ಅವಶ್ಯವೆಂದುಭಾವಿಸುವರು.

ಇದಲ್ಲದೆ ಬ್ರಿಟಿಷ್ ಸ್ವತಂತ್ರ ರಾಷ್ಟ್ರಕೂಟದಲ್ಲಿ ಸ್ವತಂತ್ರವಾದ ಸಹಭಾಗಿಯಂತೆ ಹಿಂದುಸ್ಥಾನವು ವಿಳಂಬವಾಡದೆ ಸಂಪೂರ್ಣ ಮತ್ತು ನ್ಯಾಯಬದ್ಧ ಸ್ಥಾನವನ್ನು ಪಡೆಯಬೇಕೆಂಬ ಇಂಗ್ಲಂಡಿನ ಜನತೆಯ ಸಾಮಾನ್ಯ ಅಭಿಲಾಷೆ. ಈ ಉದ್ದೇಶ ಸಾಧನೆಯಲ್ಲಿ ಸಹಾಯ ಮಾಡಬೇಕೆಂಬ ಸದಿಚ್ಛೆಗಳನ್ನು ಅವರು ಹಿಂದೀಯರಿಗೆ ತಿಳಿಸುವರು. ಬ್ರಿಟಿಷ್ ಸಾಮ್ರಾಜ್ಯದ ಪಾರ್ಲಿಮೆಂಟಿನ ಸಂಘದ ನೇತೃತ್ವದಲ್ಲಿ ಪಾರ್ಲಿಮೆಂಟಿನ ನಿಯೋಗವನ್ನು ಹಿಂದುಸ್ಥಾನಕ್ಕೆ ಕಳುಹಲು ಬೇಕಾದ ವ್ಯವಸ್ಥೆಯನ್ನು ಪಾರ್ಲಿಮೆಂಟು ಮಾಡುತ್ತಿರುವುದು." ಆ ಮೇರೆಗೆ ಪಾರ್ಲಿಮೆಂಟಿನ ನಿಯೋಗವು ಹಿಂದುಸ್ಥಾನಕ್ಕೆ ಬಂದು ಪರಿಸ್ಥಿತಿಯು ಅವಲೋಕನ ಮಾಡಿಹೋಯಿತು. ಆ ಮೇಲೆ ಬ್ರಿಟಿಷ್ ಮಂತ್ರಿ ಮಂಡಲ ನಿಯೋಗವು ಹಿಂದುಸ್ಥಾನಕ್ಕೆ ೧೯೪೬ ನೆಯ ಮಾರ್ಚ ತಿಂಗಳಲ್ಲಿ ಬಂದು ತನ್ನ ಸೂಚನೆಗಳನ್ನು ಮಂಡಿಸಿತು. ಹಿಂದುಸ್ಥಾನದ ರಾಜಕೀಯ ಮುಖಂಡರೊಡನೆ ಅದು ಮಾಡಿದ ಸಂಧಾನದ ಫಲಿತಾಂಶವೇ ಇಂದಿನ ನಡುಗಾಲ ಪ್ರಭುತ್ವ.



# ೨ ನೆಯ ಪ್ರಕರಣ.



## ನಡುಗಾಲ ಪ್ರಭುತ್ವದ ರಚನೆ.

ರಾಷ್ಟ್ರಪತಿಯಾಗಿದ್ದ ಪಂಡಿತ ಜವಾಹರಲಾಲ ನೆಹರು ಅವರಿಗೆ ವೈಸ್‌ರಾಯರು ನಡುಗಾಲ ಪ್ರಭುತ್ವವನ್ನು ರಚಿಸಲಿಕ್ಕೆ ಔತಣವನ್ನು ಕೊಟ್ಟರು. ಆ ಮೇರೆಗೆ ಪಂಡಿತಜಿಯುವರು ಕಾಂಗ್ರೆಸ್ಸಿನ ಕಾರ್ಯ ನಿರ್ವಾಹಕ ಸಮಿತಿಯೊಡನೆ ಸಮಾಲೋಚನೆ ಮಾಡಿಕೊಂಡು ತಮ್ಮ ನಿರ್ಣಯುವನ್ನು ವೈಸ್‌ರಾಯರಿಗೆ ತಿಳಿಸಿದರು. ಕಳೆದ ಅಗಷ್ಟ ೨೪ ನೆಯ ದಿನ ವೈಸ್‌ರಾಯ್ ಅವರು ನಡುಗಾಲ ಪ್ರಭುತ್ವದ ಸ್ಥಾಪನೆಯ ಬಗ್ಗೆ ಘೋಷಣೆ ಮಾಡಿದರು. ಅದರ ಸಾರಾಂಶ ಕೆಳಗಿನಂತಿದೆ:—

"ಇಂದು ನಡುಗಾಲ ಪ್ರಭುತ್ವದ ಮಂತ್ರಿಗಳ ಹೆಸರುಗಳನ್ನು ಪ್ರಸಿದ್ಧ ಪಡಿಸಿದ್ದು ನೀವು ಕೇಳಿರಬಹುದು. ಈ ಪ್ರಭುತ್ವವು ಬೇಗನೆ ಅಸ್ತಿತ್ವ ದಲ್ಲಿ ಬರುವುದು. ಹಿಂದುಸ್ಥಾನದ ಸ್ವಾತಂತ್ರ್ಯದ ಮಾರ್ಗದಲ್ಲಿ ಇದೊಂದು ಮಹತ್ವದ ಪ್ರಗತಿ. ಈ ಪ್ರಕಾರ ನೀವಾದರೂ ಭಾವಿಸು ತ್ತೀರೆಂದು ನಾನು ನಂಬಿದ್ದೇನೆ. ಹೊಸ ಪ್ರಭುತ್ವಕ್ಕೆ ಹಿಂದುಸ್ಥಾನದ ದೈನಂದಿನ ಆಡಳಿತದಲ್ಲಿ ಸ್ವಾತಂತ್ರ್ಯವನ್ನು ಹೆಚ್ಚು ಪ್ರಮಾಣದಲ್ಲಿ ಕೊಡಬೇಕೆಂಬ ಸಾರ್ವಭೌಮರ ಪ್ರಭುತ್ವದ ನೀತಿಯನ್ನು ನಾನು ಸಂಪೂರ್ಣವಾಗಿ ಆಚರಣೆಯಲ್ಲಿ ತರುವೆನು. ಪ್ರಾಂತೀಯ ಸ್ವಾಯು ತ್ತತೆಯ ಕಾರ್ಯಕ್ಷೇತ್ರದಲ್ಲಿ ನಡುಗಾಲ ಪ್ರಭುತ್ವದವರಿಗೆ ಯಾವ ಅಧಿ ಕಾರಗಳು ಇರಲಾರವು, ಮತ್ತು ಅವರು ಅದರಲ್ಲಿ ಕೈಹಾಕಲಿಕ್ಕೆ ಬಯಸಲಾರರು. ಹಿಂದುಸ್ಥಾನದ ಈ ಪ್ರಭುತ್ವದಲ್ಲಿ ಯುದ್ಧದ ಮಂತ್ರಿ ಯೂ ಹಿಂದೀಯನು ಆಗುವನು. ನಾನು ಮತ್ತು ಮುಖ್ಯ ಸೇನಾಧಿ

ಪತಿಯು ಈ ಪರಿವರ್ತನೆಯುನ್ನು ಹೃತ್ಪೂರ್ವಕವಾಗಿ ಸ್ವಾಗತಿಸುವೆವು. ಆದರೆ ಸೈನ್ಯದ ವೈಧಾನಿಕ ಅವಸ್ಥೆಯಲ್ಲಿ ಯಾವ ಬದಲಾವಣೆ ಆಗಲಾರದು. ಯಾಕೆಂದರೆ ಸೈನಿಕರು ಮಾಡಿದ ಪ್ರತಿಜ್ಞೆಯ ಮೇರೆಗೆ ಅವರು ಸಾರ್ವಭೌಮರಲ್ಲಿ ರಾಜನಿಷ್ಠೆಯನ್ನಿಡುವರು. ನಾನು ಸಾರ್ವಭೌಮರಿಗೂ ಮತ್ತು ಪಾರ್ಲಮೆಂಟಿಗೂ ಇನ್ನೂ ಹೊಣೆಗಾರನಾಗಿರುವೆನು. ಹಿಂದುಸ್ಥಾನದ ರಾಜ್ಯ ವ್ಯವಸ್ಥೆಯನ್ನು ನಡೆಸಲಿಕ್ಕೆ ರಾಷ್ಟ್ರೀಯ ಅಭಿಮತದ ಬಹುಭಾಗದ ಪ್ರತಿನಿಧಿಗಳು ನನಗೆ ಸಹಕಾರಿಗಳಾಗಿದ್ದಾರೆ. ಇದರಿಂದ ನನಗೆ ತುಂಬ ಸಂತೋಷವಾಗಿದೆ. ನಾನು ಕಾರ್ಯಸಭೆಗೆ ಅವರನ್ನು ಸ್ವಾಗತಿಸುತ್ತೇನೆ."

ನಡುಗಾಲ ಪ್ರಭುತ್ವವು ೧೪ ಜನ ಸದಸ್ಯರಿಂದ ರಚಿತವಾಗಿದೆ. ಅವರ ಹೆಸರುಗಳು ಮತ್ತು ಪ್ರತಿಯೊಬ್ಬ ಸದಸ್ಯರ ಕಾರ್ಯಭಾಗದ ಕೈಪಟ್ಟಿಗೆಗಳು ಕೆಳಗಿನಂತಿವೆ:—

| | | |
|---|---|---|
| ೧. | ಪ. ಜವಾಹರಲಾಲ ನೆಹರು ಅವರು. | ವಿದೇಶೀಯ ವ್ಯವಹಾರ, ಸಾಮ್ರಾಜ್ಯದಸಂಬಂಧಗಳು. |
| ೨. | ಸರದಾರ್ ಬಲದೇವಸಿಂಗರು. | ದೇಶರಕ್ಷಣ ಖಾತೆ. |
| ೩. | ಸರದಾರ್ ವಲ್ಲಭಭಾಯಿ ಪಟೇಲರು. | ಗೃಹ ಖಾತೆ, ಸುದ್ದಿಖಾತೆ ಮತ್ತು ಆಕಾಶವಾಣಿ. |
| ೪. | ಡಾ. ಜಾನ್ ಮೇಥಾಯಿ ಅವರು. | ಹಣ ಕಾಸಿನ ಖಾತೆ. |
| ೫. | ಮಿ. ಆಸಫ್ ಅಲಿಯುವರು. | ಉಗಿಬಂಡಿ ಖಾತೆ. |
| ೬. | ಡಾಕ್ಟರ್ ರಾಜೇಂದ್ರಪ್ರಸಾದರು. | ವ್ಯವಸಾಯ ಖಾತೆ ಮತ್ತು ಆಹಾರ ಖಾತೆ. |
| ೭. | ಶ್ರೀ ಜಗಜೀವನ್‌ರಾಮರು. | ಕೂಲಿ ಖಾತೆ. |
| ೮. | ಸರ್. ಷಫಾತ್ ಅಹಮ್ಮದಖಾನರು. | ಆರೋಗ್ಯ ಮತ್ತು ಶಿಕ್ಷಣ ಖಾತೆ. |

೯. ಮಿ. ಸೈಯ್ಯದ್ ಅಲಿ ಜಹೀರರು. ಅಂಚೆ, ವಾಯುಮಾರ್ಗ ಮತ್ತು ಶಾಸನ ಖಾತೆ

೧೦. ಶ್ರೀ. ಸಿ. ರಾಜಗೋಪಾಲಾಚಾರ್ಯರು. ಕೈಗಾರಿಕೆ ಮತ್ತು ಪೂರೈಕೆ ಖಾತೆ.

೧೧. ಬಾಬು ಶರತ್‌ಚಂದ್ರಬೋಸರು. ಗಣಿಗಳು, ವಿದ್ಯುಚ್ಛಕ್ತಿ ಖಾತೆ.

೧೨. ಶ್ರೀ ಸಿ. ಎಚ್. ಭಾಭಾ ಅವರು ವ್ಯಾಪಾರ ಖಾತೆ.

ಇಬ್ಬರು ಮುಸ್ಲಿಂ ಸದಸ್ಯರ ಹೆಸರುಗಳು ಇನ್ನೂ ಪ್ರಕಟವಾಗಬೇಕಾಗಿವೆ. ಮೇಲಿನ ಸಭೆಗೆ ಕಾರ್ಯಸಭೆ ಎಂದು ಸಂಬೋಧಿಸದೆ, ಹೊಸ ನಡುಗಾಲ ಪ್ರಭುತ್ವವೆಂದು ಹೇಳುವರು. ಇದು ಗಮನಾರ್ಹವಾಗಿದೆ. ಇದರಿಂದ ಈ ಸಭೆಯು ವೈಧಾನಿಕ ಸ್ವರೂಪ ವ್ಯಕ್ತವಾಗುವುದು.

ಮಹಾತ್ಮಾಗಾಂಧಿಯವರು ನಡುಗಾಲ ಪ್ರಭುತ್ವದ ಸದಸ್ಯರಿಗೆ ತಮ್ಮ ಆಶೀರ್ವಾದಗಳನ್ನು ಸಲ್ಲಿಸಿದ್ದಾರೆ: "ಜನತೆಯ ಸೇವೆಯೇ ನಮ್ಮ ಗುರಿ. ಮಾನವ ಜಾತಿಯ ಸೇವೆಯ ವ್ಯಾಪಕ ತತ್ವಗಳಿಗನುಸರಿಸಿ ಒಳ್ಳೆಯ ಸಹನ ಶಕ್ತಿಯಿಂದ ಕೆಲಸಮಾಡಬೇಕೆಂದು" ಉಪದೇಶ ಮಾಡಿದ್ದಾರೆ. ಇದಲ್ಲದೆ ಮುಖ್ಯ ಮಂತ್ರಿಗಳಾದ ಪಂಡಿತ ಜವಾಹರಲಾಲ ನೆಹರುರವರಿಗೆ ನಡುಗಾಲ ಪ್ರಭುತ್ವ ರಚಿಸಿದ ಬಗ್ಗೆ ಇಂಗ್ಲಂಡ್, ಅಮೇರಿಕಾ, ಚೀನ, ಇಂಡೂನೇಶಿಯಾ ಮುಂತಾದ ಪರರಾಷ್ಟ್ರಗಳ ಮುಖಂಡರಿಂದಲೂ, ಹಿಂದುಸ್ಥಾನದ ಅನೇಕ ಮಹನೀಯರಿಂದಲೂ ಶುಭಸಂದೇಶಗಳು ಬಂದಿವೆ.

ನಡುಗಾಲ ಪ್ರಭುತ್ವವನ್ನು ರಚಿಸಿ ಅಧಿಕಾರ ಸ್ವೀಕಾರ ಮಾಡುವ ಕಾಲಕ್ಕೆ ಪಂಡಿತಜೀಯವರು ಕೆಳಗಿನಂತೆ ಹೇಳಿದರು "ನಾನು ಮತ್ತು ನನ್ನ ಸಹಕಾರಿಗಳು ಇನ್ನೂ ಅಭಿನಂದನೆಗೆ ಪಾತ್ರರಾಗಿಲ್ಲ. ಯಾಕೆಂದರೆ ನಮಗೆ ಇನ್ನೂ ಧ್ಯೇಯ ಸಾಧನೆ ಮಾಡಬೇಕಾಗಿದೆ. ಅದು ಬಹಳ ಕಠಿಣತರವಾದದ್ದು. ಪ್ರಾರ್ಥನೆ ಮಾಡುವ ಅಭ್ಯಾಸ ನನಗಿಲ್ಲವಾದರೂ

ಈಗ ನಾನು ಪ್ರಾರ್ಥನೆಯ ಮನೋವೃತ್ತಿಯಿಂದ ಈ ಕಾರ್ಯವನ್ನು ಅಂಗೀಕರಿಸುತ್ತೇನೆ. ಮುಂಬರುವ ಎಡರುಗಳಲ್ಲಿ ನನ್ನ ದೇಶಬಾಂಧವರು ನೆರವಾಗುವರೆಂದು ನನಗೆ ದೃಢವಾದ ನಂಬಿಕೆಯಿದೆ. ಇಂತಹ ಪರಿಸ್ಥಿತಿಯಲ್ಲಿ ಮುಸ್ಲಿಂ ಲೀಗ್ ಬೇರೆ ಹಾದಿ ಹಿಡಿದದ್ದು ವಿಷಾದದ ಸಂಗತಿ. ಆದರೂ ಮುಸ್ಲಿಂಲೀಗಿನವರು ಮುಂದೆ ನಮ್ಮೊಡನೆ ಸಹಕರಿಸುವರೆಂದು ನಾನು ಆಶಿಸುತ್ತೇನೆ. ಅವರ ಸಲುವಾಗಿ ಬಾಗಿಲಗಳು ಯಾವಾಗಲೂ ತೆರದಿವೆ."

"ಹಿಂದುಸ್ಥಾನದಲ್ಲಿ ವಾಸಿಸುವ ಎಲ್ಲ ಜನರ ನಿಜವಾದ ಉನ್ನತಿಗಾಗಿ ಈಗ ನಮಗೆ ಕೆಲಸಮಾಡಬೇಕಾಗಿದೆ. ಇಡೀ ದೇಶದ ಹಿತವನ್ನು ಬಿಟ್ಟು ಕೆಲವು ಜಾತಿಪಂಗಡಗಳ ಹಿತವನ್ನು ಬಯಸಿದರೆ ನಾವು ಸಂಕುಚಿತ ದೃಷ್ಟಿಯವರಾಗಿ ಜನತೆಯ ವಿಶ್ವಾಸಕ್ಕೆ ಪಾತ್ರರಾಗಲಾರೆವು. ನಾನು ಮತ್ತು ನನ್ನ ಸಹಕಾರಿಗಳು ಹಿಂದೀಯರೆಂದು ಭಾವಿಸುತ್ತೇವೆ. ಹಿಂದುಸ್ಥಾನದ ಸ್ವಾತಂತ್ರ್ಯ ಸಾಧನೆಗಾಗಿ ನಾವು ಕೆಲಸಮಾಡುವೆವು. ಒಟ್ಟನಮೇಲೆ ಜನಸಾಮಾನ್ಯರ ಉದ್ಧಾರಕ್ಕಾಗಿ ನಾವು ಪ್ರಯತ್ನ ಪಡುವೆವು. ನಾವು ಇದನ್ನು ಮರೆತರೆ ನಮ್ಮ ಕರ್ತವ್ಯದಿಂದ ಚ್ಯುತರಾಗುವೆವು. ಅದೃಷ್ಟವು ಈ ಹೊಸ ಮನ್ವಂತರದಲ್ಲಿ ನಮ್ಮ ಪರೀಕ್ಷೆ ಮಾಡಬೇಕೆಂದು ಈ ಯೋಜನೆ ಮಾಡಿರುವುದು. ಹಿಂದುಸ್ಥಾನದ ಭವಿತವ್ಯದಲ್ಲಿ ವಿಶ್ವಾಸವನ್ನಿಟ್ಟು ಧೈರ್ಯದಿಂದ ಆ ಯೋಜನೆಯನ್ನು ಸ್ವೀಕಾರ ಮಾಡಿರುವೆವು. ಇಂದಿನವರೆಗೆ ಸ್ವಾತಂತ್ರ್ಯದ ಸುಖಸ್ವಪ್ನವು ನಮ್ಮಲ್ಲಿ ಉತ್ಸಾಹವನ್ನು ಹುಟ್ಟಿಸುತ್ತಿತ್ತು. ಈಗ ಆ ಸ್ವಾತಂತ್ರ್ಯವು ಅನುಭವದಲ್ಲಿ ಬರುತ್ತಿರುವುದೆಂದು ನಾವು ಭಾವಿಸುತ್ತೇವೆ. ಹಿಂದುಸ್ಥಾನ ಮತ್ತು ಅದರ ಜನತೆಗಳ ನಾವು ನಮ್ರ ಸೇವಕರೆಂದು ಹೇಳಬಯಸುತ್ತೇವೆ."

ಸ್ವಾತಂತ್ರ್ಯವು ಈಗ ಹಿಂದೀಯರಿಗೆ ಪ್ರಾಪ್ತವಾಗುತ್ತಲಿರುವುದು. ಅದನ್ನು ಅನುಭವಿಸಲಿಕ್ಕೆ ನಾವು ಅರ್ಹರೆಂದು ಸಿದ್ಧಮಾಡಬೇಕು. ವಿಶಿಷ್ಟ ಜಾತಿ ಸಂಘಗಳ ಹಿತವನ್ನು ಸಾಧಿಸಬೇಕೆಂಬ ಸಂಕುಚಿತ ದೃಷ್ಟಿಯನ್ನು ಬಿಟ್ಟು ಇಡೀ ರಾಷ್ಟ್ರದ ಹಿತಕ್ಕಾಗಿ ದುಡಿಯುವುದು ಮಂತ್ರಿಮಂಡಳಿಯ ಕರ್ತವ್ಯವೆಂದು ಪ. ನೆಹರು ಅವರು ಪೇಳಿದ ಹೇಳಿದ್ದು ಯಥಾರ್ಥವಾಗಿದೆ. ಯಾಕೆಂದರೆ ರಾಷ್ಟ್ರೀಯ ಐಕ್ಯತೆ ನಡುಗಾಲ ಪ್ರಭುತ್ವದ ತಳಗಲ್ಲು. ರಾಷ್ಟ್ರಸಭೆಯಾದ ಕಾಂಗ್ರೆಸ್ಸು ಕಳೆದ ೬೦ ವರ್ಷಗಳಿಂದ ಇಂಥ ಐಕ್ಯತೆಯ ಸಲುವಾಗಿ ಪ್ರಯತ್ನ ಪಟ್ಟಿದೆ. ಅದರ ಪ್ರಯತ್ನದ ಫಲದಿಂದ ಮುಂದೆ ಪ್ರಾಪ್ತವಾಗುವ ಸ್ವಾತಂತ್ರ್ಯದಲ್ಲಿ ಎಲ್ಲ ಹಿಂದೀಯರು ಸಮ ಭಾಗಿಗಳು. ಹಿಂದುಗಳೇ ಆಗಲಿ, ಮುಸ್ಲಿಂರೇ ಆಗಲಿ, ಪಾರ್ಸಿಗಳೇ ಆಗಲೀ ಅಥವಾ ಕ್ರಿಶ್ಚನರೇ ಆಗಲೀ ಆ ಸ್ವಾತಂತ್ರ್ಯ ಸುಖವನ್ನು ಸರ್ವರು ಅನುಭವಿಸುವರು. ಸಂಪೂರ್ಣ ಸ್ವಾತಂತ್ರ್ಯವೇ ಹಿಂದುಸ್ಥಾನದ ಗುರಿ. ಈ ಧ್ಯೇಯಸಾಧನೆಗಾಗಿ ಕುಲಗೋತ್ರಗಳನ್ನು ಅನುಲಕ್ಷಿಸದೇ ನಡುಗಾಲ ಪ್ರಭುತ್ವವು ಹಿಂದೀಯರ ಸೇವೆ ಮಾಡವುದೆಂದು ಪ. ನೆಹರು ಅವರು ಆಶ್ವಾಸನ ಕೊಟ್ಟಿರುವರು.

ರಾಜಕೀಯ ಸ್ವಾತಂತ್ರ್ಯದಂತೆ ಆರ್ಥಿಕ ಸ್ವಾತಂತ್ರ್ಯವನ್ನು ಸ್ಥಾಪಿಸುವುದು ಕಾಂಗ್ರೆಸ್ಸಿನ ಉದ್ದೇಶವೆಂದು ಬೇರೆ ಹೇಳಬೇಕಾಗಿಲ್ಲ. ಆರ್ಥಿಕ ಸ್ವಾತಂತ್ರ್ಯ ಪ್ರಾಪ್ತವಾಗದಿದ್ದರೆ ರಾಜಕೀಯ ಸ್ವಾತಂತ್ರ್ಯಕ್ಕೆ ಸ್ಥಿರತೆ ಬರಲಾರದು. ಈ ಬಗ್ಗೆ ಶೀಘ್ರವಾಗಿಯೇ ಕೈಕೊಳ್ಳಬೇಕಾದ ಕೆಲವು ಉಪಾಯಗಳನ್ನು ಪಂಡಿತ ನೆಹರು ಅವರು ಸೂಚಿಸಿರುವರು. “ಹಿಂದುಸ್ಥಾನದ ಇಂದಿನ ಭಯಂಕರ ಪರಿಸ್ಥಿತಿಯಲ್ಲಿ ಜನತೆಗೆ ಸಾಕಾಗುವಷ್ಟು ಅನ್ನ ಸಿಗುವದಿಲ್ಲ. ೪೦ ಕೋಟಿ ಜನರಿಗೆ ಹೊಟ್ಟೆತುಂಬ ಅನ್ನ ಸಿಗುವಂತೆ

ಮಾಡುವುದು ಮೊದಲನೆಯ ಕೆಲಸ. ಅದೇ ಮೇರೆಗೆ ಬಟ್ಟೆ, ಇರಲಿಕ್ಕೆ ಮನೆಗಳು, ಶಿಕ್ಷಣ ಇವುಗಳನ್ನು ಒದಗಿಸಿ ಕೊಡಬೇಕು. ಜನಸಾಮಾನ್ಯರ ಹೆಚ್ಚಿನ ಆರೋಗ್ಯ ಸಾಧನೆಗೆ ಅನುಕೂಲತೆಗಳನ್ನು ಕಲ್ಪಿಸಿ ಕೊಡಬೇಕು. ಐದು ಅಥವಾ ಹತ್ತು ವರ್ಷಗಳ ಅವಧಿಯನ್ನಿಟ್ಟುಕೊಂಡು ಇಂತಹ ದೊಡ್ಡ ಕೆಲಸಗಳನ್ನು ಮಾಡಬೇಕು." ಎಂದು ಅವರು ಹೇಳಿರುವರು. ಪಂಡಿತಜಿ ಅವರು ಹೇಳಿದ ಪ್ರಕಾರ ಭೌತಿಕ ಕೊರತೆಗಳ ನಿವಾರಣೆಯಿಂದ ಆರ್ಥಿಕ ಸ್ವಾತಂತ್ರ್ಯ ಪ್ರಾಪ್ತವಾಗುವುದು.

ಜನತೆಯ ಅಡಿಯಾಳಾದ ನಮಗೆ ಮಾನ್ಯರೆಂಬ ಪದವಿ ಬೇಡವೆಂದು ಪ. ನೆಹರು ಅವರು ಹೇಳಿರುವರು. ಪ್ರಭುತ್ವದ ಮಂತ್ರಿಗಳಿಗೆ 'ಮಾನ್ಯರು' ಎಂದು ಸಂಬೋಧಿಸುವ ರೂಢಿಯುಂಟು, ಈ ಬಿರುದು ಹಳೇಕಾಲದ್ದು. ಇಂದಿನ ಜಗತ್ತಿಗೆ ಆ ಗೌರವ ಬೇಡವಾಗಿದೆಂದು ಅವರ ಅಭಿಮತ. ಇದೇ ಮೇರೆಗೆ ನಡುಗಾಲ ಪ್ರಭುತ್ವದ ಮಂತ್ರಿಗಳು ಸ್ವೀಕರಿಸುವ ವೇತನ ಗಮನಾರ್ಹವಾಗಿದೆ. ಹಿಂದಿನ ಮಂತ್ರಿಗಳು ತಿಂಗಳೊಂದಕ್ಕೆ ೫,೫೫೫ ರೂಪಾಯಿಗಳ ವೇತನ ಪಡೆಯುತ್ತಿದ್ದರು. ಆದರೆ ಇಂದಿನ ನಡುಗಾಲ ಪ್ರಭುತ್ವದ ಮಂತ್ರಿಗಳು ತಿಂಗಳೊಂದಕ್ಕೆ ೧೫೦೦ ರೂಪಾಯಿಗಳ ವೇತನ ತೆಗೆದುಕೊಳ್ಳುವರು. ಇದರಲ್ಲಿ ಮನೆ ಬಾಡಿಗೆ ಮತ್ತು ವಾಹನದ ವೆಚ್ಚಗಳು ಸೇರಿವೆ ಎಂದು ಪ್ರಕಟಿಸಲಾಗಿದೆ.

ಪ. ನೆಹರು ಅವರಿಂದ ರಚಿಸಲ್ಪಟ್ಟ ನಡುಗಾಲ ಪ್ರಭುತ್ವದ ಘಟನಾತ್ಮಕ ಸ್ವರೂಪವನ್ನು ತಿಳಿದುಕೊಳ್ಳುವುದು ಅವಶ್ಯವಾಗಿದೆ. ಸ್ವತಂತ್ರ ಹಿಂದುಸ್ಥಾನದ ಸಲುವಾಗಿ ಒಂದು ಘಟನೆ ಸಿದ್ಧವಾಗಿ, ಅದರ ನಿಯಮಗಳಿಗನುಸರಿಸಿ ಪ್ರಭುತ್ವದ ಸ್ಥಾಪನೆಯಾಗುವ ತನಕ ರಾಜ್ಯವ್ಯವಸ್ಥೆಯು ಸುಗಮವಾಗಿ ನಡೆಯಬೇಕೆಂಬ ಉದ್ದೇಶದಿಂದ ಈ ತಾತ್ಪುರ್ತಿಕ

ಪ್ರಭುತ್ವವು ರಚಿತವಾಗಿದೆ. ಇದು ಯಾವ ವಿಧಾನದ ಬಲದಿಂದ ನಿರ್ಮಾಣವಾಗಿಲ್ಲ. ಬ್ರಿಟಿಷ್ ಮಂತ್ರಿಮಂಡಳಿಯ ನಿಯೋಗದ ಸೂಚನೆ ಗಳಿಗನುಸರಿಸಿ ನಡುಗಾಲ ಪ್ರಭುತ್ವ ಅಸ್ತಿತ್ವದಲ್ಲಿ ಬಂದಿದೆ. ಈ ಪ್ರಭು ತ್ವದ ಅಧ್ಯಕ್ಷರು ವೈಸ್‌ರಾಯರು. ಅವರು ಬ್ರಿಟಿಷ್ ಮುಕುಟ ಮತ್ತು ಪಾರ್ಲಿಮೆಂಟಿಗೆ ಜೋಖೆಗಾರರು. ಸೈನಿಕರೆಲ್ಲ ಇಂಗ್ಲಂಡಿನ ಅರಸರಲ್ಲಿ ರಾಜನಿಷ್ಠೆಯನ್ನಿಡುವರು ನಡುಗಾಲ ಪ್ರಭುತ್ವದ ಉಪಾ ಧ್ಯಕ್ಷರಾದ ಪ. ನೆಹರು ಮುಂತಾದ ಮಂತ್ರಿಗಳಿಗೆ, ಅಧಿಕಾರ ಸ್ವೀಕಾರ ಮಾಡುವದಕ್ಕಿಂತ ಮುಂಚೆ, ಇಂಗ್ಲಂಡಿನ ರಾಜರು ಮತ್ತು ಅವರ ಉತ್ತರಾಧಿಕಾರಿಗಳಲ್ಲಿ ನಾವು ರಾಜನಿಷ್ಠೆಯನ್ನು ಸಲ್ಲಿಸುತ್ತೇವೆಂದು ಪ್ರತಿಜ್ಞಾ ಮಾಡಬೇಕಾಯಿತು! ವಿಶೇಷಾಧಿಕಾರದ ಶಸ್ತ್ರವು ಇನ್ನೂ ವೈಸ್‌ರಾಯರ ಕೈಯಲ್ಲಿ ಇರುವುದು.

ನಡುಗಾಲ ಪ್ರಭುತ್ವದ ಸದಸ್ಯರು ವೈಸ್‌ರಾಯರನ್ನುಳಿದು ಎಲ್ಲರೂ ಹಿಂದೀಯರಾಗಿರುವರು. ಸೈನ್ಯ ಖಾತೆಯು ಕೈಪೆಟ್ಟಿಗೆ ಹಿಂದೀಯರ ಸ್ವಾಧೀನದಲ್ಲಿ ಬಂದು, ಮುಖ್ಯ ಸೇನಾಧಿಪತಿಯಾದ ಆಂಗ್ಲೇಯನು ಈ ಖಾತೆಯು ಹಿಂದೀಯ ಸದಸ್ಯನಿಗೆ ಅಧೀನನಾಗಿರುವನು. ರಾಜ ತಂತ್ರದ ಮುಖ್ಯ ಅಂಗವಾದ ವಿದೇಶೀಯ ವ್ಯವಹಾರಗಳ ಕೈಪೆಟ್ಟಿಗೆ ಯನ್ನು ಪ. ನೆಹರು ಅವರಿಗೆ ಒಪ್ಪಿಸಲಾಗಿದೆ. ಜಗತ್ತಿನ ಸ್ವತಂತ್ರ ರಾಷ್ಟ್ರಗಳ ಸಂಗಡ ರಾಜಕೀಯ ಸಂಬಂಧವನ್ನು ಬೆಳಿಸಿ ಹಿಂದೀ ರಾಯಭಾರಿಗಳ ನಿಯೋಜನೆ ಆ ದೇಶಗಳಲ್ಲಿ ಆಗಲಿರುವುದು. ಇದು ಸ್ವಾತಂತ್ರ್ಯೋದಯದ ಚಿಹ್ನ. ಸಂಪೂರ್ಣ ಸ್ವಾತಂತ್ರ್ಯವನ್ನು ಹಿಂದೀ ಯರಿಗೆ ಒಪ್ಪಿಸುತ್ತೇವೆಂದು ಬ್ರಿಟಿಷ್ ಪ್ರಭುತ್ವದವರು ಹೇಳುತ್ತಿರು ವರು. ಆ ಸ್ವಾತಂತ್ರ್ಯವನ್ನು ಪಡಿಯಲಿಕ್ಕೆ ಈ ಹೊಸ ಪ್ರಭುತ್ವವು

ತಾತ್ಪೂರ್ತಿಕವಾಗಿ ಸ್ಥಾಪಿತವಾಗಿದೆಂಬ ಮಾತು ಸ್ಪಷ್ಟವಾಗಿದೆ

ಹಿಂದುಸ್ಥಾನದ ಹೊಸ ನಡುಗಾಲ ಪ್ರಭುತ್ವದ ಸದಸ್ಯರು ಜನತೆಯ ಪ್ರತಿನಿಧಿಗಳು. ಅವರು ಮಹಾಜನರ ವಿಶ್ವಾಸಕ್ಕೆ ಪಾತ್ರರಾಗಿದ್ದಾರೆಂಬುವುದರಲ್ಲಿ ಸಂದೇಹವಿಲ್ಲ. ಆದರೆ ಅವರು ಶಾಸನ ಸಭೆಯಿಂದ ನಿಯೋಜಿತರಾಗಿಲ್ಲವಾದಕಾರಣ ಅವರು ಆ ಸಭೆಗೆ ಹೊಣೆಗಾರರಲ್ಲ. ಜನತೆಯಿಂದ ಆರಿಸಲ್ಪಟ್ಟ ಶಾಸನ ಸಭೆಯ ಪ್ರತಿನಿಧಿಗಳಿಂದೊಡಗೂಡಿದ ಮಂತ್ರಿಮಂಡಳವು ಶಾಸನ ಸಭೆಗೆ ಹೊಣೆಗಾರ ಆಗುವದು. ವೈಧಾನಿಕ ರೀತಿಯಿಂದ ಇಂದಿನ ಪ್ರಭುತ್ವ ಶಾಸನ ಸಭೆಗೆ ಹೊಣೆಗಾರವಾಗಿಲ್ಲವೆಂಬುದು ಸ್ಪಷ್ಟ. ಈ ಪ್ರಭುತ್ವದ ಮಂತ್ರಿಗಳಾದ ಶ್ರೀ. ಸಿ. ರಾಜಗೋಪಾಲಾಚಾರ್ಯರು ನಾವು ಶಾಸನದ ಸಭೆಗೆ ಹೊಣೆಗಾರರಾಗಿ ನಡೆಯುತ್ತೇವೆಂದು ಹೇಳಿದ್ದರೂ, ಅದು ಔಪಚಾರಿಕ. ಯಾಕೆಂದರೆ ಘಟನಾತ್ಮಕ ದೃಷ್ಟಿಯಿಂದ ಇಂದಿನ ಪರಿಸ್ಥಿತಿಯಲ್ಲಿ ಶಾಸನ ಸಭೆಯ ಅಂಕೆಯಲ್ಲಿ ಕಾರ್ಯ ಸಭೆಯು ಬರಲಾರದು.

ಈ ನಡುಗಾಲಪ್ರಭುತ್ವ ಕಾರ್ಯ ಸಭೆಯೋ (ಎಕ್ಸಿಕ್ಯೂಟಿವ್ಹ ಕೌನ್ಸಿಲ್) ಅಥವಾ ವಿಶಿಷ್ಟ ಮಂತ್ರಿಮಂಡಳಿಯೋ (ಕ್ಯಾಬಿನೆಟ್) ಎಂಬ ಮಹತ್ವದ ಪ್ರಶ್ನೆ ಇತ್ತೀಚಿಗೆ ತಲೆದೂರುತ್ತಿರುವುದು. ಎಕ್ಸಿಕ್ಯೂಟಿವ್ಹ ಕೌನ್ಸಿಲ್ ಮತ್ತು ಕ್ಯಾಬಿನೆಟ್ ಇವುಗಳಲ್ಲಿರುವ ವೈಧಾನಿಕ ಭೇದವನ್ನು ತಿಳಿದುಕೊಳ್ಳುವುದು ಅವಶ್ಯವಾಗಿದೆ. ಕಾರ್ಯಸಭೆ ಎಂದರೆ ರಾಜತಂತ್ರವನ್ನು ನಡೆಸುವ ಮಂತ್ರಿಮಂಡಳಿ ಎಂದು ಬೋಧವಾಗುವುದು. ಶಾಸನ ಸಭೆಯ ಮೂಲಕ ವ್ಯಕ್ತವಾಗುವ ರಾಜ್ಯದ ಸಂಕಲ್ಪವನ್ನು ಆಚರಣೆಯಲ್ಲಿ ತರುವುದೇ ಅದರ ಕಾರ್ಯಭಾಗ. ೧೯೧೯ ನೆಯ ಶಾಸನದ ಪ್ರಕಾರ ವೈಸ್‌ರಾಯರ ಕಾರ್ಯಸಭೆ ರಾಜ್ಯ ವ್ಯವಸ್ಥೆಯಲ್ಲಿ ಅವರಿಗೆ

ಸಲಹೆ ಕೊಡುವುದು. ಈ ಸಭೆಯ ಸದಸ್ಯರ ಮತ ಬಾಹುಳ್ಯದಿಂದ ಕೊಟ್ಟ ಅಭಿಪ್ರಾಯ. ನಿರ್ಣಯಗಳಿಂದ ಸಾಧಾರಣವಾಗಿ ವೈಸ್‌ರಾಯರು ಬದ್ಧರಾಗುವರು. ಆದರೆ ಹಿಂದುಸ್ಥಾನದ ಕ್ಷೇಮ, ಶಾಂತತೆ ಮತ್ತು ಹಿತಗಳಿಗೆ ಭಂಗಬರುವದೆಂದು ವೈಸ್‌ರಾಯರು ಭಾವಿಸಿದರೆ, ಕಾರ್ಯ ಸಭೆಯ ಅಭಿಮತದ ವಿರುದ್ಧ ನಿರ್ಣಯ ಕೊಡಬಲ್ಲರು.

ಕ್ಯಾಬಿನೆಟ್ ಪದ್ಧತಿಯಲ್ಲಿ ಕೆಲವು ವಿಶಿಷ್ಟ ಲಕ್ಷಣಗಳಿರುವುವು. ರಾಜಕೀಯ ಸಜಾತೀಯತೆ, ದೃಢವಾದ ಮತೈಕ್ಯ ಮತ್ತು ಸಾಮುದಾಯಿಕ ಹೊಣೆ ಇವುಗಳು ಕ್ಯಾಬಿನೆಟ್ಟಿನ ಮುಖ್ಯ ಅಂಶಗಳು. ಇವು ಕಾರ್ಯ ಸಭೆಯಲ್ಲಿ ಇರುವದಿಲ್ಲ. ಪ್ರತಿಯೊಂದು ವಿಷಯವನ್ನು ದೃಢವಾದ ಒಮ್ಮತದಿಂದ ನಿರ್ಣಯಿಸಬೇಕಾಗುವುದು. ಅಲ್ಲಿ ಭಿನ್ನಾಭಿಪ್ರಾಯಕ್ಕೆ ಆಸ್ಪದವಿಲ್ಲ. ಯಾವದೊಂದು ವಿಷಯದಲ್ಲಿ ಮತಭೇದ ಆಗುವ ಪ್ರಸಂಗ ಬಂದರೆ ಮಿತ್ರಭಾವನೆಯಿಂದ ಚರ್ಚೆಮಾಡಿಕೊಂಡು ಭಿನ್ನಾಭಿಪ್ರಾಯವನ್ನು ನಿವಾರಿಸಿ ಮಂತ್ರಿಗಳು ಒಮ್ಮತದಿಂದ ನಿರ್ಣಯಕ್ಕೆ ಬರುವರು. ಕ್ಯಾಬಿನೆಟ್ ಮಂತ್ರಿಮಂಡಳಿಯು ಕೊಟ್ಟ ನಿರ್ಣಯದ ಹೊಣೆಯನ್ನು ಸಮಾನವಾಗಿ ಹೊರುವುದು ಎಲ್ಲ ಸದಸ್ಯರ ಕರ್ತವ್ಯ.

ನಡುಗಾಲ ಪ್ರಭುತ್ವದಲ್ಲಿ ಮುಸ್ಲಿಂಲೀಗಿನ ಪ್ರವೇಶವಾದಮೇಲೆ ಈ ಸಾಮೂಹಿಕ ಹೊಣೆಯ ಬಗ್ಗೆ ವಾದ ಹುಟ್ಟಿದೆ. ಲೀಗಿನವರು ಅದಕ್ಕೆ ಕ್ಯಾಬಿನೆಟ್ ಎಂದು ಒಪ್ಪಲಿಕ್ಕೆ ಸಿದ್ಧರಿಲ್ಲ, ಹಾಗೆ ಮಾಡಿದರೆ ಅವರಿಗೆ ಕಾಂಗ್ರೆಸ್ ಮಂತ್ರಿಗಳೊಡನೆ ಒಮ್ಮತದಿಂದ ಕೆಲಸ ಮಾಡಬೇಕಾಗುವುದು. ಕಲಹ ಮಾಡಬೇಕೆಂಬ ಉದ್ದೇಶದಿಂದ ಒಳಹೊಕ್ಕವರಿಗೆ ರಾಜಕೀಯ ಮತೈಕ್ಯ ಹೇಗೆ ರುಚಿಸಬೇಕು ?

೧೯೧೯ ನೆಯ ಶಾಸನ ಪ್ರಕಾರ ವೈಸ್‌ರಾಯರ ಮಂತ್ರಿಮಂಡಳಿಯಲ್ಲಿ ಕಾರ್ಯಸಭೆಯ ಲಕ್ಷಣಗಳೇ ಇರುವವು. ಆದರೆ ೧ ನೆಯ ಸೆಪ್ಟೆಂಬರಿನ ದಿನ ರಾಜತಂತ್ರದ ವಿಭಾಗಗಳನ್ನು ಹಂಚುವದಕ್ಕಾಗಿ ವೈಸ್‌ರಾಯರ ಪರವಾಗಿ ಪ್ರಕಟವಾದ ಅಧಿಕಾರಯುಕ್ತ ಪತ್ರದಲ್ಲಿ ಈ ಮಂತ್ರಿಮಂಡಳಿಗೆ ಕಾರ್ಯಸಭೆಯನ್ನದೆ "ನಡುಗಾಲ ಪ್ರಭುತ್ವ" ಎಂದು ಸಂಬೋಧಿಸಲಾಗಿದೆ. ಈ ಶಬ್ದ ಹೊಸದಾಗಿ ಬಳಿಕೆಯಲ್ಲಿ ಬಂತು. ೨೪ ಆಗಸ್ಟಿನ ದಿನ ವೈಸ್‌ರಾಯರು ಆಕಾಶವಾಣಿಯ ಮೂಲಕ ಮಾಡಿದ ಭಾಷಣದಲ್ಲಿ "ಹೊಸ ನಡುಗಾಲ ಪ್ರಭುತ್ವ" ಎಂದು ಹೇಳಿದರು. ಅದರ ಸ್ವರೂಪದ ಮಹತ್ವವನ್ನು ಅನುಲಕ್ಷಿಸಿ ಕಾಂಗ್ರೆಸ್ಸು ಅದನ್ನು ಸ್ವಾಗತ ಮಾಡಿತು.

ಹೊಸ ಪ್ರಭುತ್ವದ ತಳಹದಿಯ ಬಗ್ಗೆ ವೈಸ್‌ರಾಯರು ಮಿ. ಜಿನ್ನಾ ಅವರಿಗೆ ೪ ನೆಯ ಅಕ್ಟೋಬರಿನ ದಿನ ಕಳಿಸಿದ ಉತ್ತರದಲ್ಲಿ ಸ್ಪಷ್ಟೀಕರಣ ಮಾಡಿರುವರು. "ಸಮ್ಮಿಲಿತ ಪ್ರಭುತ್ವದಲ್ಲಿ ಯಾವದೊಂದು ಮುಖ್ಯ ಪಂಗಡವೂ ಮಹತ್ವಪೂರ್ಣ ವಿಷಯಗಳ ನೀತಿಯ ಬಗ್ಗೆ ವಿರೋಧ ಮಾಡಿದರೆ ಅದನ್ನು ನಿರ್ಣಯ ಮಾಡುವುದು ಅಸಾಧ್ಯವಾಗುವುದು. ಕ್ಯಾಬಿನೇಟಿನಲ್ಲಿ ಉದ್ಭವಿಸುವ ಜಾತೀಯ ಪ್ರಕರಣಗಳ ಬಗ್ಗೆ ಮತಗಳನ್ನು ತೆಗೆದುಕೊಂಡು ನಿರ್ಣಯಿಸುವುದು ಘಾತಕವೆಂದು ನಾನು ಮತ್ತು ನನ್ನ ಸಹಕಾರಿಗಳು ಒಪ್ಪಿಕೊಂಡಿರುವೆವು. ಯಾವದೊಂದು ವಿಷಯದಲ್ಲಿಯೇ ಆಗಲಿ ಮತವಿರೋಧವಾಗುವಂತೆ ಕಂಡುಬಂದರೆ ಕ್ಯಾಬಿನೇಟಿನ ಅಧಿವೇಶನ ಸೇರುವವರಕಿಂತ ಮುಂಚಿತವಾಗಿ ಮೈತ್ರೀಯ ಭಾವನೆಯಿಂದ ಚರ್ಚೆ ಮಾಡಿಕೊಂಡು ಆ ವಿರೋಧವನ್ನು ದೂರಮಾಡಿಕೊಳ್ಳಬೇಕು. ನಡುಗಾಳ ಪ್ರಭುತ್ವದ ಕಾರ್ಯಶಕ್ತಿ ಮತ್ತು ಗೌರವಗಳು

ಉಳಿಯಬೇಕಾದರೆ ಹೀಗೆ ಮಾಡುವುದು ಅವಶ್ಯವಾಗಿದೆ. ಪರಸ್ಪರ ಒಪ್ಪಿಗೆಯ ಕ್ರಮದಿಂದಲೇ ಸಮ್ಮಿಲಿತ ಪ್ರಭುತ್ವ ಕೆಲಸಮಾಡುವುದು. ಇಲ್ಲವಾದರೆ ಅದಕ್ಕೆ ಕೆಲಸ ಮಾಡಲಿಕ್ಕೆ ಎಂದಿಗೂ ಸಾಧ್ಯವಾಗಲಾರದು."

ನಡುಗಾಲ ಪ್ರಭುತ್ವದಲ್ಲಿ ಮುಸ್ಲಿಂಲೀಗಿನ ಪ್ರವೇಶ ಆಗುವತನಕ ಪ. ನೆಹರು ಮತ್ತು ಅವರ ಸಹಕಾರಿಗಳು ರಾಜತಂತ್ರದಲ್ಲಿ ಒಮ್ಮತದಿಂದ ನಡೆದುಕೊಂಡರು. ರಾಜಕೀಯ ವ್ಯವಹಾರಗಳಲ್ಲಿ ಸಾಮುದಾಯಿಕ ಹೊಣೆಯನ್ನು ಹೊತ್ತುಕೊಂಡು ಕ್ಯಾಬಿನೇಟಿನ ಸಾಂಪ್ರದಾಯವನ್ನು ಸ್ಥಾಪಿಸಿಕೊಂಡಿರುವರು. ಹಿಂದುಸ್ಥಾನದ ಇಂದಿನ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ಹಾಗೆ ಮಾಡುವುದು ಅವಶ್ಯಕ. ಇದಲ್ಲದೆ ಸಂಪೂರ್ಣ ಸ್ವಾತಂತ್ರ್ಯವನ್ನು ಪಡಿಯಲಿಕ್ಕೆ ಕೈಕೊಳ್ಳಬೇಕಾದ ಉಪಾಯಗಳನ್ನು ಒಮ್ಮತದಿಂದಲೇ ಸ್ವೀಕಾರ ಮಾಡಬೇಕಾಗುವುದು. ಕ್ಯಾಬಿನೇಟಿನ ಸಾಂಪ್ರದಾಯಕ್ಕನುಸರಿಸಿ ಒಮ್ಮತದಿಂದ ನಡೆದು ಸಾಮೂಹಿಕ ಹೊಣೆಯನ್ನು ಹೊತ್ತರೆ ರಾಜತಂತ್ರವು ಸರಳವಾಗಿ ನಡೆಯುವವಲ್ಲದೆ ಸ್ವಾತಂತ್ರ್ಯ ಸಾಧನೆಯಲ್ಲಿ ಸಹಾಯವಾಗುವುದು.

ನಡುಗಾಲ ಪ್ರಭುತ್ವದ ರಚನೆಯ ಬಗ್ಗೆ ಅಮೇರಿಕಾದೇಶದ ನ್ಯೂಯಾರ್ಕ ಟೈಮ್ಸ್ ಎಂಬ ವೃತ್ತಪತ್ರವು ವ್ಯಕ್ತಪಡಿಸಿದ ಅಭಿಪ್ರಾಯ ಗಮನಾರ್ಹವಾಗಿದೆ, "ಅಖಿಲ ಭಾರತ ಪ್ರಭುತ್ವಕ್ಕೆ ಹೊಸ ಮನ್ವತಂರದಲ್ಲಿ ಈಗ ಮೊದಲು ಅಧಿಕಾರ ಪ್ರಾಪ್ತವಾಗಿದೆ. ಸ್ವಾತಂತ್ರ್ಯ ಸಾಧನೆಯ ಮಾರ್ಗದಲ್ಲಿ ಇದೊಂದು ದೊಡ್ಡ ಪ್ರಗತಿ. ಈ ಎರಡು ವರ್ಷಗಳಲ್ಲಿ ಸಂಯುಕ್ತ ಹಿಂದುಸ್ಥಾನದ ಸಲುವಾಗಿ ಸಂಪೂರ್ಣ ಸ್ವಾತಂತ್ರ್ಯವನ್ನು ಸಂಪಾದಿಸುತ್ತೇವೆಂದು ಈ ಪ್ರಭುತ್ವದ ಮುಂದಾಳುಗಳಾದ ಪ. ನೆಹರು ಅವರು ಧೃಢಸಿಶ್ಚಯ ಮಾಡಿರುವರು. ಅವರು ನಡುಗಾಲ ಪ್ರಭುತ್ವವನ್ನು ರಚಿಸುವ ಕಾಲಕ್ಕೆ ಮುಚ್ಚಿದ ಕಾರ್ಮೋಡಗಳು ಇನ್ನು ಬಯಲಾಗಿಲ್ಲ, ಹಿಂದುಸ್ಥಾನದ ಅದೃಷ್ಟ ಭವಿಷತ್‌ಕಾಲದ ಗರ್ಭದಲ್ಲಿ ಅಡಗಿದೆ."

# ೩ ನೆಯ ಪ್ರಕರಣ.



## ಮುಸ್ಲಿಂಲೀಗಿನ ಪ್ರವೇಶ.

ನಡುಗಾಲ ಪ್ರಭುತ್ವದಲ್ಲಿ ಮುಸ್ಲಿಂಲೀಗಿನ ಪ್ರವೇಶದಿಂದ ದೇಶದಲ್ಲಿ ಹಬ್ಬಿದ ವ್ಯಾಕುಲತೆ ದೂರವಾಗುವುದೆಂದು ಆಶಿಸಲಾಗಿದೆ. ಇದಕ್ಕೂ ಪೂರ್ವದಲ್ಲಿ ಕಾಂಗ್ರೆಸ್ಸಿನೊಡನೆ ಒಪ್ಪಂದವನ್ನು ಮಾಡಿಕೊಂಡು ಮುಸ್ಲಿಂ ಲೀಗು ನಡುಗಾಲ ಪ್ರಭುತ್ವದಲ್ಲಿ ಸಹಕರಿಸಿದ್ದರೆ ವಿಶೇಷ ಅನುಕೂಲ ವಾಗುತ್ತಿತ್ತು ರಾಷ್ಟ್ರಸಭೆಯಾದ ಕಾಂಗ್ರೆಸ್ಸು ಕುಲಗೋತ್ರಗಳನ್ನನು ಲಕ್ಷಿಸದೆ ಜನತೆಯ ಸೇವೆಗಾಗಿ ಟೊಂಕ ಕಟ್ಟಿದೆ. ಅಲ್ಪಸಂಖ್ಯಾಕರರ ಹಿತದ ಬಗ್ಗೆ ಅದು ಆಶ್ವಾಸನ ಕೊಟ್ಟಿರುವುದು. ಇದಲ್ಲದೆ ಮುಸ್ಲಿಂ ಲೀಗಿಗೆ ಸಾಕಾಗುವಷ್ಟು ಪ್ರಾತಿನಿಧ್ಯವನ್ನು ಕೊಡಲು ಒಪ್ಪಿಕೊಂಡಿದೆ. ಇಂತಹ ಪರಿಸ್ಥಿತಿಯಲ್ಲಿ ಕಾಂಗ್ರೆಸ್ಸಿನೊಡನೆ ವಿರೋಧ ಬೆಳೆಸುವುದರಿಂದ ದೇಶಕ್ಕೆ ಯಾವ ಹಿತವಾಗಲಾರದು. ಜಾತೀಯ ಸಮಸ್ಯವನ್ನು ಬಿಡಿ ಸುವುದು ಅಸಾಧ್ಯವಲ್ಲ. ಜಗತ್ತಿನ ಸ್ವತಂತ್ರ ರಾಷ್ಟ್ರಗಳಲ್ಲಿ ಹಿಂದುಸ್ಥಾನವು ಯೋಗ್ಯವಾದ ಸ್ಥಾನವನ್ನು ಪಡೆಯಬೇಕಾಗಿದೆ. ಈ ಮಹತ್ಕಾರ್ಯ ಸಾಧನೆಯಲ್ಲಿ ದೇಶದ ಎಲ್ಲ ಪಂಗಡಗಳು ಒಂದಾಗುವುದವಶ್ಯಕ.

ಮುಸ್ಲಿಂಲೀಗು ಪ್ರಭುತ್ವದಲ್ಲಿ ಸಹಕರಿಸಿದ್ದು ಸಂತೋಷದ ಸಂಗತಿ. ಈ ಕೃತ್ಯದಿಂದ ಅದು ಬಹುಜನರ ಅಭಿನಂದನೆಗೆ ಪಾತ್ರವಾಗಿದೆ. ದೇಶದ ಆಡಳಿತೆಯಲ್ಲಿ ಅದು ಮನಸ್ಸಿನಿಂದ ಸಹಕರಿಸಿ ದೀರ್ಘಕಾಲದ ಯೋಜನೆಯಲ್ಲಿ ಭಾಗವಹಿಸುವುದೆಂದು ಆಶಿಸಲಾಗಿದೆ. ಲೀಗಿನ ಕಾರ್ಯ ದರ್ಶಿಗಳು, ಮತ್ತು ನಡುಗಾಲಪ್ರಭುತ್ವದ ಹಣಕಾಸಿನ ಮಂತ್ರಿಗಳಾದ

ಮಿಸ್ಟರ್ ಲಿಯಾಕತ್ ಅಲೀಖಾನ್ ಅವರು ಒಂದು ಹೇಳಿಕೆಯ ಮೂಲಕ ತಮ್ಮ ಧೋರಣೆಯನ್ನು ಸ್ಪಷ್ಟಮಾಡಿದ್ದಾರೆ. ಹಿಂದುಸ್ಥಾನದ ಸಮಸ್ಯೆಗಳನ್ನು ಬಿಡಿಸಲು ಶಾಂತತೆ ಸೌಹಾರ್ದಗಳ ಅವಶ್ಯಕತೆಯಿರುವುದು. ಪ್ರಭುತ್ವದ ಸದಸ್ಯರೊಡನೆ ನಾವು ಸಹಕಾರ ಮಾಡುವೆವೆಂದು ಅವರು ಪ್ರತಿಪಾದಿಸಿರುವರು. ಅವರು ಅದೇಪ್ರಕಾರ ನಡೆಯುವರೆಂದು ನಿರೀಕ್ಷಿಸಲಾಗಿದೆ.

ಮುಸ್ಲಿಂಲೀಗು ಇಂದಿನವರೆಗೆ ಅಲ್ಪಕಾಲ ಮತ್ತು ದೀರ್ಘಕಾಲ ಯೋಜನೆಗಳ ಬಗ್ಗೆ ತಾಳಿದ ಧೋರಣೆ ಗಮನಾರ್ಹವಾಗಿದೆ. ಬ್ರಿಟಿಷ್ ಮಂತ್ರಿಮಂಡಳಿಯ ನಿಯೋಗವು ಮೇ ತಿಂಗಳ ೧೬ ನೆಯ ದಿನಾಂಕದಲ್ಲಿ ಘೋಷಿಸಿದ ಯೋಜನೆಯನ್ನು ಜೂನ ೬ ನೆಯ ದಿನಾಂಕದಲ್ಲಿ ಸೇರಿದ ಮುಸ್ಲಿಂಲೀಗಿನ ಸಾಮಾನ್ಯ ಸಭೆಯು ಒಪ್ಪಿಕೊಂಡಿತು. ಆ ಮೇಲೆ ರಾಜಕೀಯ ಕ್ಷೇತ್ರದಲ್ಲಿ ಸಂಭವಿಸಿದ ವಿಷಯಗಳು ಆದರ ಅಸಂತೋಷಕ್ಕೆ ಕಾರಣವಾದವು. ಮುಂದೆ ೨೯ ಜುಲೈಗೆ ಅದೇ ಸಭೆಯು ಪುನಃ ಮುಂಬೈಯಲ್ಲಿ ಸೇರಿ ಸ್ವೀಕರಿಸಿದ ಯೋಜನೆಯನ್ನು ನಿರಾಕರಿಸಿತು. ಆ ಕಾಲಕ್ಕೆ ಮಿ. ಜಿನ್ನಾ ಅವರು ಮಾಡಿದ ಭಾಷಣದ ಸಾರಾಂಶ ಕೆಳಗಿನಂತಿದೆ.

“ಕಳೆದ ಮೂರು ತಿಂಗಳುಗಳಿಂದ ನಡೆದ ವೈಧಾನಿಕ ಸಂಧಾನಗಳನ್ನು ಮತ್ತು ಬ್ರಿಟಿಷ್ ಮಂತ್ರಿಮಂಡಳಿಯ ನಿಯೋಗ ಹಿಂದುಸ್ಥಾನದಿಂದ ತೆರಳಿದಮೇಲೆ ಘಟಿಸಿದ ವಿಷಯಗಳನ್ನನುಲಕ್ಷಿಸಿದರೆ ಮುಸ್ಲಿಂಲೀಗ್ ತನ್ನ ಶಕ್ತಿಯನ್ನು ಅವಲಂಬಿಸಿ ಪಾಕಿಸ್ಥಾನದ ಸಾಧನೆ ಮಾಡಿಕೊಳ್ಳಬೇಕೆ ವಿನಾ ಮತ್ತೊಂದು ಉಪಾಯವಿಲ್ಲ. ಬ್ರಿಟಿಷ್ ಪ್ರಭುತ್ವದ ಮಾತಿನಲ್ಲಿ ನಾವು ಎಂದಿಗೂ ವಿಶ್ವಾಸ ಮಾಡಬಾರದು. ಬ್ರಿಟಿಷ್ ಮಂತ್ರಿ

ಮಂಡಳಿಯು ನಿಯೋಗವು ಕೊಟ್ಟ ಮಾತಿನಂತೆ ನಡೆಯಲಿಲ್ಲ. ಯಾಕೆಂದರೆ ಕಾಂಗ್ರೆಸ್ಸಿನ ದೇವತೆಗಳನ್ನು ಒಲಿಸಲಿಕ್ಕೆ ಅದು ನಡುಗಾಲ ಪ್ರಭುತ್ವದ ರಚನೆಯನ್ನು ಮುಂದಕ್ಕೆ ಹಾಕಿತು. ಮಂತ್ರಿಮಂಡಳಿಯ ನಿಯೋಗ ಕಾಂಗ್ರೆಸ್ಸಿನ ಕೈಯಲ್ಲಿ ಆಟದ ಗೊಂಬೆಯಾಗಿದೆ. ಸವರ್ಣ ಹಿಂದುಗಳ ಸಂಖ್ಯಾ ಬಾಹುಳ್ಯ ಉಳ್ಳ ಕಾಂಗ್ರೆಸ್ಸು ವೈಧಾನಿಕ ಸಂಧಾನದ ಕಾಲಕ್ಕೆ ಕೇವಲ ಶಬ್ದದ ಸಲುವಾಗಿ ಬಡಿದಾಡಿತು. ಮುಸ್ಲಿಂಲೀಗಿನ ಸಂಗಡ ಅದು ದ್ವೇಷ ಮಾಡುವುದು. ನಿರಂಕುಶ ಪ್ರಭುತ್ವವನ್ನು ದಿಲ್ಲಿಯಲ್ಲಿ ಸ್ಥಾಪಿಸಬೇಕೆಂದು ಕಾಂಗ್ರೆಸ್ಸು ಹವಣಿಸುತ್ತಿರುವುದು. ಮುಸ್ಲಿಂಲೀಗನ್ನು ಬಿಟ್ಟು ನಡುಗಾಲ ಪ್ರಭುತ್ವವನ್ನು ರಚಿಸಿಕೊಳ್ಳಬೇಕೆಂದು ಅದು ಪ್ರಯತ್ನನಡೆಸಿದೆ. ಕಾಂಗ್ರೆಸ್ಸು ಹಾಗೆ ಅವಶ್ಯವಾಗಿ ಮಾಡಿಕೊಳ್ಳಬಹುದು. ಆದರಿಂದ ನಾವು ಹೆದರುವುದಿಲ್ಲ. ಮುಂದೆ ಏನು ಮಾಡಬೇಕೆಂಬುದನ್ನು ನಾವು ನೋಡಿಕೊಳ್ಳುವೆವು."

"ಈಗ ಮುಸ್ಲಿಂಲೀಗಿಗೆ ಎರಡು ಪ್ರಶ್ನಗಳನ್ನು ಬಿಡಿಸಬೇಕಾಗಿದೆ. (೧) ಮೇ ೧೬ ನೇ ದಿನಾಂಕಿನಲ್ಲಿ ಮಂತ್ರಿಮಂಡಳಿಯ ನಿಯೋಗ ಮತ್ತು ವೈಸ್‌ರಾಯರಿಂದ ಘೋಷಿತವಾದ ಘಟನಾಸಮಿತಿಯ ಬಗ್ಗೆ ಕೊನೆಯ ನಿರ್ಣಯವನ್ನು ತೆಗೆದುಕೊಳ್ಳಬೇಕು. (೨) ನಡುಗಾಲ ಪ್ರಭುತ್ವದ ಬಗ್ಗೆ ಮಂತ್ರಿಮಂಡಳಿಯ ನಿಯೋಗ ಮತ್ತು ವೈಸ್‌ರಾಯರು ಅನುಸರಿಸಿದ ಧೋರಣೆಯನ್ನು ಎದುರಿಸಲಿಕ್ಕೆ ಕೈಕೊಳ್ಳಬೇಕಾದ ಉಪಾಯಗಳನ್ನು ಯೋಚಿಸುವುದು." ಈ ಬಗ್ಗೆ ಮುಸ್ಲಿಂಲೀಗು ಕೆಳಗಿನಂತೆ ತೀರ್ಮಾನವನ್ನು ಸ್ವೀಕರಿಸಿತು. "ಹಿಂದುಸ್ಥಾನದ ಆರು ಮುಸ್ಲಿಂಪ್ರಾಂತಗಳಲ್ಲಿ ವಿಳಂಬವಾಗದ ಆಧಿಪತ್ಯವುಳ್ಳ ಪಾಕಿಸ್ಥಾನವನ್ನು ಸ್ಥಾಪಿಸಬೇಕೆಂಬ ಮುಸಲ್ಮಾನರ ಬೇಡಿಕೆಯಾಗಿದ್ದರೂ, ರಕ್ಷಣೆ, ವಿದೇಶೀಯ ರಾಜತಂತ್ರ

ಮತ್ತು ಅರಿಕೆಯುಖಾತೆ, ಈ ಮೂರು ವಿಷಯಗಳುಳ್ಳ ಕೇಂದ್ರವನ್ನು ಹತ್ತು ವರುಷಗಳ ಸಲುವಾಗಿ ಮುಸ್ಲಿಂಲೀಗು ಒಪ್ಪಿಕೊಂಡಿತ್ತು. ಯಾಕೆಂದರೆ ಅದು ಮುಸ್ಲಿಂ ಪ್ರಾಂತಗಳನ್ನು 'ಬ' ಮತ್ತು 'ಕ' ಗುಂಪುಗಳಲ್ಲಿ ಸೇರಿಸಿ ತಮ್ಮ ಪ್ರಾಂತಗಳ ಘಟನೆ ರಚಿಸುವ ಅಧಿಕಾರ ಅವುಗಳಿಗೆ ಪ್ರಾಪ್ತವಾಗಿದೆಯೆಂದು ಹೇಳಲಾಗಿತ್ತು. ಇವಲ್ಲದೆ ಮುಸ್ಲಿಂಲೀಗಿನ ಐದುಜನ ಸದಸ್ಯರು ಕಾಂಗ್ರೆಸ್ಸಿನ ಐದುಜನ ಸದಸ್ಯರು, ಒಬ್ಬ ಶೀಖ ಸದಸ್ಯ, ಒಬ್ಬ ಕ್ರಿಶ್ಚಿಯನ್ ಅಥವಾ ಆಂಗ್ಲೋ ಇಂಡಿಯನ್‌ಸದಸ್ಯ ಹೀಗೆ ಹನ್ನೆರಡು ಜನ ಸದಸ್ಯರಿಂದ ನಡುಗಾಲ ಪ್ರಭುತ್ವವನ್ನು ರಚಿಸಲಾಗುವುದೆಂದು ವೈಸ್‌ರಾಯರು ಅಧಿಕಾರವಾಣಿಯಿಂದ ಹೇಳಿದ್ದರು. ಆದರೆ ವಿಶ್ವಾಸ ಘಾತವಾಡಲಾಯಿತು. ಕಾಂಗ್ರೆಸ್ಸನ್ನು ಸಂತೋಷ ಪಡಿಸಲಿಕ್ಕೆ ನಡುಗಾಲಪ್ರಭುತ್ವದ ಸದಸ್ಯರ ಸಂಖ್ಯೆಯಲ್ಲಿ ೫,೫,೨ ರ ಬದಲಾಗಿ ೫,೫,೩ ಮಾಡಲಿಕ್ಕೆ ಸಿದ್ಧವಾಯಿತು. ಆದರೂ ಕಾಂಗ್ರೆಸ್ಸು ಒಪ್ಪಲಿಲ್ಲ. ಎರಡು ಮುಖ್ಯಪಂಗಡಗಳಲ್ಲಿ ಒಂದು ಪಂಗಡವು ಮೇ ೧೬ ನೇ ದಿನಾಂಕದ ಹೇಳಿಕೆ ಒಪ್ಪಿದ್ದರೆ ಆ ಯೋಜನೆಯನ್ನು ಒಪ್ಪುವ ಒಂದು ಮುಖ್ಯ ಪಂಗಡ ಮತ್ತು ಇನ್ನಿತರ ಪ್ರತಿನಿಧಿಗಳೊಂದಿಗೆ ನಡುಗಾಲಪ್ರಭುತ್ವವನ್ನು ಸ್ಥಾಪಿಸುವೆವೆಂದು ವೈಸ್‌ರಾಯರು ಆಶ್ವಾಸನಕೊಟ್ಟಿದ್ದರು. ಇದಕ್ಕೆ ವಿರೋಧವಾಗಿ ಅವರು ಮೇ ೧೬ ನೇ ದಿನಾಂಕದ ಸೂಚನೆಗಳನ್ನು ಮುರಿದು ನಡುಗಾಲಪ್ರಭುತ್ವದ ಸ್ಥಾಪನೆಯನ್ನು ಮುಂದಕ್ಕೆ ಹಾಕಿದರು.

ಇಷ್ಟಾದರೂ ಕಾಂಗ್ರೆಸ್ಸು ನಡುಗಾಲ ಪ್ರಭುತ್ವವನ್ನು ಒಪ್ಪಲಿಲ್ಲ. ಘಟನಾಸಮಿತಿಯ ಬಗ್ಗೆ ಅದು ತಾಳಿದ ಧೋರಣೆ ಸರಿಯಾದುದಲ್ಲ. ಯಾಕೆಂದರೆ ಘಟನಾಸಮಿತಿಗೆ ಹೋಗುವದನ್ನು ಒಪ್ಪಿಕೊಂಡರೂ ಅದರ ಯೋಜನೆಯೊಳಗಿನ ಮೂಲ ಒಪ್ಪಂದಗಳನ್ನು ಸ್ವೀಕರಿಸುವದಿಲ್ಲವೆಂದು

ಸಾರಿತು. ಅದಲ್ಲದೆ ಘಟನಾಸಮಿತಿ ಸರ್ವಾಧಿಕಾರವುಳ್ಳ ಸಮಿತಿಯಾದ ಕಾರಣ ಯಾವ ನಿರ್ಬಂಧಗಳಿಗೊಳಪಡದೆ ಮನಬಂದ ನಿರ್ಣಯವನ್ನು ಸ್ವೀಕರಿಸುವುದೆಂದು ಕಾಂಗ್ರೆಸ್ಸು ಪ್ರತಿಪಾದಿಸಿತು. ಈ ಬಗ್ಗೆ ಪಾರ್ಲಿಮೆಂಟಿನಲ್ಲಾದ ಘೋಷಣೆಯು ಸಮಾಧಾನಕಾರಕವಾಗಿಲ್ಲ. ಮುಖ್ಯಸಂಗಡಗಳು ಘಟನಾಸಮಿತಿಯಲ್ಲಿ ಸೇರಲಿಕ್ಕೆ ಮೂಲಭೂತ ತತ್ವಗಳನ್ನು ಹೇಳಿ ಉಭಯ ಸಂಗಡದವರು ಸಹಕರಿಸಿದರೆ ಮಾತ್ರ ಈ ಯೋಜನೆ ಯಶಸ್ವಿಯಾಗುವುದೆಂದು ಮಂತ್ರಿಮಂಡಳಿಯ ನಿಯೋಗ ಮತ್ತು ವೈಸ್‌ರಾಯರು ಎಷ್ಟೋ ಸಲ ಸಾರಿದ್ದಾರೆ. ಆದರೆ ಘಟನಾಸಮತಿಯು ಯಶಸ್ವಿಯಾಗಬೇಕಾದರೆ ಬೇಕಾಗುವ ಅವಶ್ಯವಿಷಯುಗಳು ಇನ್ನೂ ಸಂಭವಿಸಿಲ್ಲವೆಂದು ಕಾಂಗ್ರೆಸ್ಸಿನ ಧೋರಣೆಯಿಂದ ಗೊತ್ತಾಗುವುದು. ಬ್ರಿಟಿಷ್ ಪ್ರಭುತ್ವವು ಕಾಂಗ್ರೆಸ್ಸನ್ನು ಸಂತೋಷಪಡಿಸಲು, ಕೊಟ್ಟ ಆಶ್ವಾಸನ ಮತ್ತು ವಚನಗಳ ಭಂಗ, ಮಾಡುತ್ತಿರುವುದಾದಕಾರಣ ಮುಸ್ಲಿಂಲೀಗು ಬ್ರಿಟಿಷ್ ನಿಯೋಗದ ಯೋಜನೆಯ ಬಗ್ಗೆ ೬ ಜೂನಿಗೆ ಕೊಟ್ಟ ಒಪ್ಪಿಗೆಯನ್ನು ಹಿಂತೆಗೆದುಕೊಳ್ಳುವುದು."

## ನೇರವಾದ ಕೃತ್ಯ.

ಮುಸ್ಲಿಂಲೀಗು ಅದೇ ಮಿತಿಗೆ ಮತ್ತೊಂದು ಗೊತ್ತುವಳಿ "ನೇರವಾದ ಕೃತ್ಯ"ದ ಬಗ್ಗೆ ನಿಶ್ಚಯಿಸಿತು. ಅದರ ಸಾರಾಂಶ ಕೆಳಗಿನಂತಿದೆ:—

"ಕಾಂಗ್ರೆಸ್ಸು ರಾಜಕೀಯ ಒಪ್ಪಂದಕ್ಕೆ ಸಿದ್ಧವಾಗದಿದ್ದರಿಂದಲೂ ಮತ್ತು ಬ್ರಿಟಿಷ್ ಪ್ರಭುತ್ವವು ಮುಸ್ಲಿಂ ಲೀಗಿನೊಡನೆ ವಿಶ್ವಾಸಘಾತ ಮಾಡಿದುದರಿಂದಲೂ ಮೇ ೧೬ ನೇ ದಿನಾಂಕದ ಮಂತ್ರಿ ಮಂಡಳಿಯ ನಿಯೋಗ ಮತ್ತು ವೈಸ್‌ರಾಯರ ಯೋಜನೆಯನ್ನು ಮುಸ್ಲಿಂಲೀಗು ನಿರಾಕರಿಸಿದ ಕಾರಣ, ಒಪ್ಪಂದ ಮತ್ತು ವೈಧಾನಿಕ ಉಪಾಯಗಳಿಂದ

ಹಿಂದುಸ್ಥಾನದ ಸಮಸ್ಯವನ್ನು ಶಾಂತರೀತಿಯಿಂದ ಬಿಡಿಸಬೇಕೆಂಬ ಪ್ರಯತ್ನದಲ್ಲಿ ಮುಸ್ಲಿಂ ಹಿಂದುಸ್ಥಾನವು ದಣಿದುಹೋದ ಕಾರಣ, ಬ್ರಿಟಿಷರ ಈ ಉಪೇಕ್ಷೆಯಿಂದ ಸವರ್ಣ ಹಿಂದುಗಳ ರಾಜ್ಯವನ್ನು ಸ್ಥಾಪಿಸಬೇಕೆಂದು ಕಾಂಗ್ರೆಸ್ಸು ಟೊಂಕ ಕಟ್ಟಿದ್ದಕಾರಣ, ಹಿಂದುಸ್ಥಾನದ ವ್ಯವಹಾರಗಳಲ್ಲಿ ಅಧಿಕಾರವುಳ್ಳ ರಾಜಕಾರಣಕ್ಕೆ ಸ್ಥಾನ ಪ್ರಾಪ್ತವಾದ ಕಾರಣದಿಂದಲೂ ಹಿಂದುಸ್ಥಾನದ ಮುಸಲ್ಮಾನರು ಸ್ವತಂತ್ರ ಮತ್ತು ಆಧಿಪತ್ಯವುಳ್ಳ ಪಾಕಿಸ್ಥಾನದ ರಾಜ್ಯವನ್ನು ವಿಳಂಬ ಮಾಡದೇ ಸ್ಥಾಪಿಸಿ ಕೊಳ್ಳುವವರೆಗೆ ಸಂತುಷ್ಟರಾಗಲಾರರೆಂಬ ಮಾತು ಸ್ಪಷ್ಟವಾಗಿದ್ದ ಕಾರಣ, ಅಲ್ಪಕಾಲ ಅಥವಾ ದೀರ್ಘಕಾಲದ ಯೋಜನೆಯೆಂಬ ಯಾವ ವಿಧಾನ ಮತ್ತು ಮುಸ್ಲಿಮರ ಅನುಮತಿ, ಒಪ್ಪಿಗೆಗಳನ್ನು ಪಡೆಯದ ಕೇಂದ್ರದಲ್ಲಿ ನಡುಗಾಲ ಪ್ರಭುತ್ವದ ರಚನೆ ಇವುಗಳ ಪ್ರತಿಕಾರ ಅವರು ಮಾಡುವರಾದಕಾರಣ, ಇಂದಿನ ಬ್ರಿಟಿಷರ ಮತ್ತು ಮುಂಬರುವ ಸವರ್ಣ ಹಿಂದುಗಳ ಆಧಿಪತ್ಯದ ದಾಸ್ಯದಿಂದ ಮುಕ್ತಿ ಯನ್ನು ಪಡೆಯಲಿಕ್ಕೂ ನ್ಯಾಯಯುಕ್ತವಾದ ಹಕ್ಕುಗಳ ಪ್ರತಿಪಾದ ನೆಗೂ, ಗೌರವವನ್ನು ಸಂಪಾದಿಸಲಿಕ್ಕೂ, ಪಾಕಿಸ್ತಾನದ ಸಾಧನೆಗಾಗಿ ನೇರವಾದ ಕೃತ್ಯವನ್ನು ಆರಂಭಿಸುವ ಕಾಲ ಈಗ ಒದಗಿ ಬಂದಿದೆಯೆಂದು ಅಖಿಲ ಭಾರತ ಮುಸ್ಲಿಂಲೀಗಿಗೆ ದೃಢವಾದ ನಂಬಿಕೆಯಾಗಿದೆ. ಆದು ದರಿಂದ ಮುಸ್ಲಿಂ ಲೀಗನ್ನು ಪ್ರತಿಯೊಬ್ಬ ಮುಸ್ಲಿಂನು ಅನುಸರಿಸಬೇ ಕೆಂತಲೂ, ತ್ಯಾಗ ಬಲಿದಾನಗಳಿಗೆ ಯಾವಾಗಲೂ ಸಿದ್ಧನಾಗಿರಬೇ ಕೆಂತಲೂ ಈ ಸಭೆ ಮುಸ್ಲಿಂ ಜನತೆಯನ್ನು ಕರೆಯುತ್ತದೆ. ಇದಲ್ಲದೆ ನೇರವಾದ ಕೃತ್ಯದ ಕಾರ್ಯಕ್ರಮವನ್ನು ಹಾಕಿಕೊಳ್ಳಲಿಕ್ಕೆ, ಮೇಲೆ ಹೇಳಿದಂತೆ ಆಚರಣೆ ಮಾಡಲಿಕ್ಕೆ ಮತ್ತು ಮುಂಬರುವ ಹೋರಾಟವನ್ನು

ಕಾಂಗ್ರೆಸ್ಸು ಸೇರಿಸಕೂಡದು. (೪) ಭದ್ರತೆಯ ಸಾಧನೆ. ಜಾತೀಯ ಸಮಸ್ಯೆಗಳು ಉದ್ಭವಿಸಿದಾಗ ಕಾರ್ಯಸಭೆಯು ಹಿಂದೂ ಅಥವಾ ಮುಸ್ಲಿಂ ಬಹುಸಂಖ್ಯಾಕರ ಸದಸ್ಯರು ಅವುಗಳನ್ನು ವಿರೋಧಿಸಿದರೆ ಆ ಬಗ್ಗೆ ಯಾವ ನಿರ್ಣಯವನ್ನು ಅಂಗೀಕರಿಸಬಾರದೆಂಬ ರೂಢಿಯನ್ನು ಹಾಕಿಕೊಳ್ಳಬೇಕು. (೫) ಸಂಯುಕ್ತ ರಾಷ್ಟ್ರಗಳ ಸಂಘದ ಆಚರಣೆಯನ್ನು ಅನುಸರಿಸಿ ಉಭಯ ಜಾತಿಗಳಿಗೆ ಯೋಗ್ಯವಾಗುವ ಉಪಾಧ್ಯಕ್ಷರ ಯೋಜನೆಯನ್ನು ಬಾರಿಬಾರಿಯಿಂದ ಮಾಡಬೇಕು. (೬) ಸಿಖ್ ಪಾರ್ಶಿ, ಇಂಡಿಯನ್ ಕ್ರಿಶ್ಚಿಯನ್ ಇವರ ಪ್ರತಿನಿಧಿಗಳ ಯೋಜನೆಯಲ್ಲಿ ಮುಸ್ಲಿಂ ಲೀಗಿನ ಅಭಿಪ್ರಾಯವನ್ನು ತೆಗೆದುಕೊಂಡಿಲ್ಲ. ಅದು ಈ ಯೋಜನೆಯನ್ನು ಒಪ್ಪಿದೆಯೆಂದು ತಿಳಿಯಲಾಗದು. ಮುಂದೆ ಆ ಸ್ಥಾನಗಳು ಕಾರಣಾಂತರದಿಂದ ತೆರವಾದರೆ ಕಾಂಗ್ರೆಸ್ಸು ಮತ್ತು ಲೀಗ ಇವುಗಳ ಅನುಮತಿಯನ್ನು ಪಡೆದು ತುಂಬಬೇಕು. (೭) ಮುಖ್ಯ ಪಂಗಡಗಳಾದ ಕಾಂಗ್ರೆಸ್ಸು ಮತ್ತು ಲೀಗ್ ಇವುಗಳಲ್ಲಿ ರ ಸ್ವತಂತ್ರದ ಮಹತ್ವದ ಕೈ ಪೆಟ್ಟಿಗೆಗಳನ್ನು ಸಮಾನವಾಗಿ ಹಂಚಿ ಕೊಡಬೇಕು. (೮) ಕಾಂಗ್ರೆಸ್ಸು ಮತ್ತು ಲೀಗುಗಳ ಅನುಮತಿ ಪಡೆಯದೆ ಮೇಲಿನ ವ್ಯವಸ್ಥೆಗಳಲ್ಲಿ ಯಾವ ಬದಲಾವಣೆ ಮಾಡಕೂಡದು. (೯) ನಡುಗಾಲ ಪ್ರಭುತ್ವದ ಪುನರ್ರಚನೆಯಾಗಿ ಮೇಲೆ ಹೇಳಿದ ವಿಷಯಗಳ ಒಪ್ಪಂದವು ಸಂಭವಿಸಿ ಒಳ್ಳೆಯ ವಾತಾವರಣ ನಿರ್ಮಾಣವಾಗುವ ತನಕ ದೀರ್ಘ ಕಾಲದ ಯೋಜನೆಯನ್ನು ಮುಂದಕ್ಕೆ ಹಾಕಬೇಕು.

ವೈಸ್‌ರಾಯ್ ಅವರು ಮಿಸ್ಟರ್ ಜಿನ್ನಾ ಅವರಿಗೆ ಅಕ್ಟೋಬರ್ ನಾಲ್ಕನೆಯ ದಿನಾಂಕದಲ್ಲಿ ಕಳಿಸಿದ ಉತ್ತರವು ಕೆಳಗಿನಂತಿದೆ:—

(೧) ಇದು ಸಮ್ಮತಿಸಲ್ಪಟ್ಟಿವೆ. (೨) ಇದರ ಹೊಣೆ ನಮ್ಮ ಮೇಲೆ

ಇದೆ ಎಂಬ ನಿಮ್ಮ ಹೇಳಿಕೆ ಮತ್ತು ಒಪ್ಪಿಗೆ ಇವುಗಳನ್ನು ನಾನು ಗಮನಿಸುತ್ತೇನೆ. (೩) ಇದನ್ನು ಒಪ್ಪಲಿಕ್ಕೆ ನಾನು ಅಸಮರ್ಥ. ಪ್ರತಿಯೊಂದು ಪಂಗಡವು ತನ್ನ ಪ್ರತಿನಿಧಿಯನ್ನು ನಿಯೋಜಿಸಲಿಕ್ಕೆ ಸ್ವತಂತ್ರವಾಗಿರಬೇಕು. (೪) ಸಮ್ಮಿಲಿತ ಪ್ರಭುತ್ವದಲ್ಲಿ ಒಂದು ಮುಖ್ಯಪಂಗಡಕ್ಕೆ ವಿರೋಧವಿದ್ದರೆ ರಾಜತಂತ್ರದ ಮುಖ್ಯ ವಿಷಯವನ್ನು ನಿರ್ಣಯಿಸುವುದು ಅಶಕ್ಯವಾಗುವುದು. ಮಂತ್ರಿಮಂಡಳಿಯಲ್ಲಿ ಜಾತೀಯ ಪ್ರಶ್ನೆಗಳನ್ನು ಮತಪ್ರದಾನದಿಂದ ನಿರ್ಣಯಿಸುವುದು ಘಾತಕವೆಂದು ನಾನು ಮತ್ತು ನನ್ನ ಸಹಕಾರಿಗಳು ಒಪ್ಪಿಕೊಂಡಿರುವೆವು. ಸಭೆ ಕೂಡುವುದಕ್ಕಿಂತ ಮುಂಚಿತವಾಗಿ ಮೈತ್ರೀಯ ಭಾವನೆಯಿಂದ ಚರ್ಚಿಸಿಕೊಂಡು ಮತಭೇದವನ್ನು ದೂರಮಾಡಿಕೊಳ್ಳುವುದರಿಂದಲೇ ನಡುಗಾಲ ಪ್ರಭುತ್ವದ ಗೌರವ ಮತ್ತು ಯೋಗ್ಯತೆಗಳು ಉಳಿಯುವುವು. ಪರಸ್ಪರ ಅನುಕೂಲತೆಗಳನ್ನು ಒದಗಿಸಿಕೊಟ್ಟಪಕ್ಷದಲ್ಲಿ ಸಮ್ಮಿಲಿತ ಪ್ರಭುತ್ವವು ಕೆಲಸಮಾಡುವುದು. ಇಲ್ಲವಾದರೆ ಅದು ಯಾವಕೆಲಸವನ್ನೂ ಮಾಡಲಾರದು. (೫) ಬಾರಿ ಬಾರಿಯಿಂದ ಉಪಾಧ್ಯಕ್ಷರ ನಿಯೋಜನೆಯನ್ನು ಆಚರಣೆಯಲ್ಲಿ ತರಬೇಕಾದರೆ ಅನೇಕ ಅಡಚಣೆಗಳು ಹುಟ್ಟುವುವು. ಅದು ಶಕ್ಯವೆಂದು ನನಗೆ ತೋರುವುದಿಲ್ಲ. ನಾನು ಮತ್ತು ಉಪಾಧ್ಯಕ್ಷರು ಈ ಸಭೆಗೆ ಬಾರದಿದ್ದಾಗ ಮುಸ್ಲಿಂಲೀಗಿನ ಒಬ್ಬ ಸದಸ್ಯನಿಗೆ ಆ ಸ್ಥಾನವನ್ನು ಕೊಡುವಂತೆ ಏರ್ಪಡಿಸಲಾಗುವುದು. ಮಂತ್ರಿಮಂಡಳಿಯ ಒಂದು ಸಮೀಕರಣ ಸಭೆಗೆ ಮುಸ್ಲಿಂಲೀಗಿನ ಸದಸ್ಯನನ್ನು ಅಧ್ಯಕ್ಷನನ್ನಾಗಿ ನಿಯೋಜಿಸುತ್ತೇನೆ. ಇದು ಮಹತ್ವದ ಸ್ಥಾನ. ಹಿಂದಕ್ಕೆ ಆ ಸಭೆಗೆ ನಾನು ತಪ್ಪದೆ ಅಧ್ಯಕ್ಷನಾಗಿರುತ್ತಿದ್ದೆ. ಮುಂದೆ ವಿಶಿಷ್ಟ ಪ್ರಸಂಗಬಂದರೆ ಅಧ್ಯಕ್ಷನಾಗುವೆನು. (೬) ಮೂರೂ ಸ್ಥಾನಗಳಲ್ಲಿ ಯಾವುದೊಂದು

ತೆರವಾದರೆ ಉಭಯಪಂಗಡದವರ ಸಲಹೆ ತೆಗೆದುಕೊಂಡು ಹೊಸ ನಿಯೋಜನೆ ಮಾಡಬೇಕೆಂಬುವಕ್ಕೆ ನನ್ನ ಒಪ್ಪಿಗೆಯಿದೆ. (೭) ಸಧ್ಯದ ಪರಿಸ್ಥಿತಿಯಲ್ಲಿ ಮಂತ್ರಿಮಂಡಳಿಯ ಎಲ್ಲ ರಾಜ್ಯತಂತ್ರದ ವಿಭಾಗಗಳು (ಕೈಪೆಟ್ಟಿಗೆಗಳು) ಮಹತ್ವಪೂರ್ಣವಾಗಿವೆ. ಇಂತಹ ಕೈಪೆಟ್ಟಿಗೆಯೋ ಮಹತ್ವದ್ದೆಂದು ಪ್ರತಿಪಾದಿಸುವುದು ಅವರವರ ಅಭಿಪ್ರಾಯದ ಫಲಿತಾಂಶ. ಅಲ್ಪಸಂಖ್ಯಾಕರಿಗೆ ಮುಖ್ಯ ಕೈಪೆಟ್ಟಿಗೆ ಕೊಡುವುದಿಲ್ಲವೆಂದು ಹೇಳು ವುದು ಸಾಧ್ಯವಲ್ಲ. ಶ್ರೀ. ಜಗಜೀವನರಾಮ್ ಅವರಿಗೆ ಈಗಿದ್ದ ಕೂಲಿ ಕಾರ ರಾಜ್ಯ ವಿಭಾಗವನ್ನು ಮುಂದೆ ಕೂಡ ನಡೆಸುವುದು ಅವಶ್ಯವಾಗಿದೆ. ಇವುಗಳನ್ನುಳಿದು ಮಹತ್ವದ ರಾಜ್ಯತಂತ್ರದ ವಿಭಾಗಗಳನ್ನು ಉಭಯ ಪಂಗಡಗಳಿಗೆ ಸಮಾನವಾಗಿ ಹಂಚಿಕೊಡಲಾಗುವುದು. ಮಾತುಕತೆ ಗಳಿಂದ ಇದರ ವಿವರವನ್ನು ನಿಶ್ಚಯಿಸಬಹುದು. (೮) ನನಗೆ ಒಪ್ಪಿಗೆ ಯಾಗಿದೆ. (೯) ಮೇ ೧೬ ನೆಯ ದಿನಾಂಕದ ಹೇಳಿಕೆಯ ಒಪ್ಪಿಗೆಯೇ ಮಂತ್ರಿಮಂಡಳದಲ್ಲಿ ಪ್ರವೇಶಮಾಡಲಿಕ್ಕೆ ತಳಹದಿಯಾಗಿದೆ. ಆದುದರಿಂದ ಮುಂಬೈಯಲ್ಲಿ ಸ್ವೀಕೃತವಾದ ತೀರ್ಮಾನದ ಪುನರ್ವಿಚಾರಣೆಗಾಗಿ ಮುಸ್ಲಿಂಲೀಗು ಬೇಗನೇ ಕೂಡುವುದೆಂದು ನಾನು ಆಶಿಸುತ್ತೇನೆ.

ಈ ಅವಧಿಯಲ್ಲಿ ಕಾಂಗ್ರೆಸ್ಸು ಮತ್ತು ಲೀಗು ಇವುಗಳಲ್ಲಿ ಸಂಧಾನ ಪ್ರಾರಂಭವಾಗಿತ್ತು. ಆದರೆ ಅದು ಯಶಸ್ವಿ ಆಗಲಿಲ್ಲ. ಕಾಂಗ್ರೆಸ್ಸಿನೊಡನೆ ಸಂಧಾನ ಮುರಿದಮೇಲೆ ಜಿನ್ನಾ ಅವರು ವೈಸ್‌ರಾಯರನ್ನು ಆಶ್ರ ಯಿಸಿ ಅವರ ಸಹಾಯದಿಂದ ನಡುಗಾಲ ಪ್ರಭುತ್ವದಲ್ಲಿ ತಮ್ಮ ಮನಸ್ಸಿನ ಪ್ರಕಾರ ಪ್ರವೇಶ ಪಡೆಯಬೇಕೆಂದು ಪ್ರಯತ್ನಪಟ್ಟರು. ಆದರೆ ವೈಸ್‌ ರಾಯರಿಗೂ ಕೂಡ ಈ ವಿಷಯದಲ್ಲಿ ಹೆಚ್ಚಿನ ಬದಲಾವಣೆ ಮಾಡಲು ಸಾಧ್ಯವಿದ್ದಿಲ್ಲ. ಕಾಂಗ್ರೆಸ್ಸಿಗೆ ಇದು ಮಹತ್ವಪೂರ್ಣ ತಾತ್ವಿಕ ವಿಷಯ

ವಾಯಿತು. ಯಾಕೆಂದರೆ ನೆಹರು ಅವರು ಮುಂಚಿತವಾಗಿ ಮಂತ್ರಿ ಮಂಡಳವನ್ನು ರಚಿಸಿದ್ದರು. ರಾಜತಂತ್ರದ ವಿಭಾಗಗಳನ್ನು ಹಂಚುವ ಅಧಿಕಾರ ಅವರಿಗೇ ಸೇರಿದುದು. ಎಲ್ಲ ಮುಖ್ಯಮಂತ್ರಿಗಳಿಗೆ ಈ ವೈಧಾನಿಕ ಅಧಿಕಾರವು ಪ್ರಾಪ್ತವಾಗುವುದು. ಅಂದಮೇಲೆ ವೈಸ್‌ರಾಯರು ಅದರಲ್ಲಿ ಕೈಹಾಕಲಿಕ್ಕೆ ಇಚ್ಛಿಸಲಿಲ್ಲ. ಸಾರಾಂಶ, ಉಪಾಧ್ಯಕ್ಷರಾದ ಪಂಡಿತ ನೆಹರು ಅವರ ಅನುಮತಿಯಂತೆ ಮಂತ್ರಿಮಂಡಳದಲ್ಲಿ ಬದಲಾವಣೆಗಳಾದವು.

ಮೇಲೆ ವಿವರಿಸಿದ ವೈಸ್‌ರಾಯರ ಉತ್ತರಕ್ಕೆ ಜಿನ್ನಾ ಅವರಿಗೆ ಪ್ರತ್ಯುತ್ತರ ಕೊಡಲಿಕ್ಕೆ ಸಾಧ್ಯವಿದ್ದಿಲ್ಲ. ಅವರು ಅಕ್ಟೋಬರ್ ೧೩ ನೆಯ ದಿನಾಂಕದಲ್ಲಿ ಮತ್ತೊಂದು ಪತ್ರವನ್ನು ವೈಸ್‌ರಾಯರಿಗೆ ಬರೆದರು. ಅದರ ಮೂಲಕ ಮೇಲಿನ ಸೂಚನೆಗಳಿಗೆ ಸಮ್ಮತಿಯಿರದಿದ್ದರೂ ಅನೇಕ ಕಾರಣಗಳಿಂದ ಮುಸಲ್ಮಾನರ ಹಿತವನ್ನು ಅನುಲಕ್ಷಿಸಿ ನಡುಗಾಲ ಪ್ರಭುತ್ವದಲ್ಲಿ ಸೇರಲಿಕ್ಕೆ ಒಪ್ಪುತ್ತೇವೆಂದು ಹೇಳಿದರು. ಆ ಪ್ರಕಾರ ವೈಸ್‌ರಾಯರ ಮನೆಯಿಂದ ಹೊರಡಿಸಿದ ಪ್ರಕಟನೆಯು ಮೇರೆಗೆ ರಾಜ್ಯತಂತ್ರದ ವಿಭಾಗಗಳಲ್ಲಿ ಕೆಳಗಿನಂತೆ ಬದಲಾವಣೆಗಳಾದವು.

| | | |
|---|---|---|
| ೧. | ಮಿಸ್ಟರ್ ಲಿಯಾಖತ ಅಲೀಖಾನ್ | ಹಣಕಾಸಿನ ಖಾತೆ. |
| ೨. | ,, ಐ. ಐ. ಚುಂದ್ರಿಗರು | ವ್ಯಾಪಾರ ,, |
| ೩. | ,, ಅಬ್ದುರ್ ರಬ್ ನಿಷ್ತರ್ | ಅರಿಕೆ, (ಅಂಚೆ,ಗಾಳಿ) ,, |
| ೪. | ,, ಗಜನಫರ್ ಅಲೀಖಾನ್ | ಆರೋಗ್ಯ ,, |
| ೫. | ,, ಜೋಗೇಂದ್ರನಾಥ ಮಂಡಲ್ | ಶಾಸನ ವಿಧಿ ,, |

ಈ ಮಂತ್ರಿಗಳ ಪ್ರವೇಶದಿಂದ ಆದ ಬದಲಾಣೆಗಳು ಕೆಳಗಿನಂತಿವೆ.

| | |
|---|---|
| ಡಾ. ಜಾನ್ ಮೇಥಾಯಿ ಅವರು | ಉದ್ಯೋಗ ಮತ್ತು ಪೂರೈಕೆ |
| ಮಿ. ಸಿ. ರಾಜಗೋಪಾಲಾಚಾರ್ಯರು | ಶಿಕ್ಷಣ, ಕಲೆ. |
| ,, ಸಿ. ಎಚ್. ಭಾಭಾ ಅವರು | ಗಣಿಗಳು, ಶಕ್ತಿ. |

ಇನ್ನುಳಿದ ರಾಜತಂತ್ರದ ವಿಭಾಗಗಳು ಮುಂಚಿನಂತೆಯೇ ಉಳಿದಿರುವುವು.

| | |
|---|---|
| ಪ, ಜವಾಹರಲಾಲ ನೆಹರು ಅವರು | ವಿದೇಶೀಯ ರಾಜತಂತ್ರ, ಸ್ವತಂತ್ರ ರಾಷ್ಟ್ರಕೂಟದ ವ್ಯವಹಾರ. |
| ಸರ್ದಾರ್ ವಲ್ಲಭಭಾಯಿ ಪಟೇಲರು. | ಗೃಹ, ಸುದ್ದೀಖಾತೆ. ಆಕಾಶವಾಣಿ |
| ಡಾ, ರಾಜೇಂದ್ರಪ್ರಸಾದರು. | ಆಹಾರ, ವ್ಯವಸಾಯ |
| ಮಿ. ಆಸಫ್ ಅಲಿ ಅವರು | ಉಗಿಬಂಡಿ. |
| ಸರ್ದಾರ್ ಬಲದೇವಸಿಂಗರು. | ರಕ್ಷಣೆ. |
| ಮಿ, ಜಗಜೀವನರಾಮರು, | ಕೂಲಿ. |

ತಾತ್ಕಾಲಿಕವಾಗಿ ನಿಯೋಜಿತರಾಗಿದ್ದ ಸರ್ ಷಫಾತ್ ಅಹಮದಖಾನ ಮಿ, ಅಲಿ ಜಹೀರ ಮತ್ತು ಶ್ರೀ. ಶರತ್‌ಚಂದ್ರಬೋಸ ಅವರಿಗೆ ತಮ್ಮ ಸ್ಥಾನಗಳನ್ನು ಮುಸ್ಲಿಂಲೀಗಿನವರ ಸಲುವಾಗಿ ಬಿಡಬೇಕಾಯಿತು. ಸಾರಾಂಶ ಮುಸ್ಲಿಂಲೀಗಿನ ಪ್ರವೇಶದಿಂದ ಮಂತ್ರಿಮಂಡಳಿಯು ನಿಯೋಗದ ಸೂಚನೆಗಳಿಗನುಸರಿಸಿ ನಡುಗಾಲ ಪ್ರಭುತ್ವವು ಪೂರ್ಣವಾಯಿತು.



## ೪ ನೆಯ ಪ್ರಕರಣ.



### ನಡುಗಾಲ ಪ್ರಭುತ್ವದ ರಾಜ್ಯತಂತ್ರ.

ನಡುಗಾಲ ಪ್ರಭುತ್ವದ ಸ್ಥಾಪನೆಯಿಂದ ಹಿಂದೀಯರಿಗೆ ಬಹಳ ಮಟ್ಟಿಗೆ ರಾಜ್ಯಾಧಿಕಾರವು ಪ್ರಾಪ್ತವಾಗಿ, ರಾಜ್ಯತಂತ್ರದ ಎಲ್ಲ ವಿಭಾಗಗಳು ಅವರ ಸ್ವಾಧೀನದಲ್ಲಿ ಬಂದಿವೆ. ಘಟನಾ ಸಮಿತಿಯು ಸ್ವತಂತ್ರ ಹಿಂದುಸ್ಥಾನದ ಸಲುವಾಗಿ ಒಂದು ಘಟನೆಯನ್ನು ರಚಿಸಿದ ಮೇಲೆ ಹಿಂದುಸ್ಥಾನಕ್ಕೆ ಸಂಪೂರ್ಣ ಸ್ವಾತಂತ್ರ್ಯ ಪ್ರಾಪ್ತವಾಗುವುದು. ಈ ನಡುಗಾಲದಲ್ಲಿ ವಸಾಹತಿ ರಾಜ್ಯಗಳ ಅವಸ್ಥೆ ಹಿಂದುಸ್ಥಾನಕ್ಕೆ ಸಿಕ್ಕಿ ಅದು ಸ್ವರಾಜ್ಯವನ್ನು ಅನುಭವಿಸುವುದೆಂದು ಬ್ರಿಟಿಷ್ ಪ್ರಭುತ್ವದವರು ಆಶ್ವಾಸನ ಕೊಟ್ಟಿರುವರು. ಆ ಪ್ರಕಾರ ಇಂದು ಹಿಂದೀಯರು ರಾಜ್ಯಸೂತ್ರಗಳನ್ನು ತಮ್ಮ ಕೈಯಲ್ಲಿ ತೆಗೆದುಕೊಂಡಿರುವರು. ಅವರಿಗೆ ಪ್ರಾಪ್ತವಾದ ರಾಜ್ಯಾಧಿಕಾರವನ್ನು ಅಂತಸ್ಥ ರಾಜ್ಯತಂತ್ರ ಮತ್ತು ಬಾಹ್ಯ ರಾಜ್ಯತಂತ್ರ ಹೀಗೆ ಎರಡು ಭಾಗಗಳಲ್ಲಿ ವಿಂಗಡಿಸಬಹುದು. ರಕ್ಷಣೆ, ಗೃಹ ಮುಂತಾದ ವಿಷಯಗಳು ಅಂತಸ್ಥ ರಾಜ್ಯ ತಂತ್ರದಲ್ಲಿ ಸಮಾವೇಶ ಆಗುವುವು. ವಿದೇಶೀಯ ವ್ಯವಹಾರ, ಸಾಮ್ರಾಜ್ಯದ ಸಂಗಡ ಸಂಬಂಧಗಳು ಬಾಹ್ಯ ರಾಜ್ಯ ತಂತ್ರದಲ್ಲಿ ಸೇರುವುವು.

ಅಂತಸ್ಥ ರಾಜ್ಯತಂತ್ರದಲ್ಲಿ ಈಗ ರಕ್ಷಣೆಗೆ ಪ್ರಥಮ ಸ್ಥಾನ ಪ್ರಾಪ್ತವಾಗಿದೆ. ಯಾಕೆಂದರೆ ಸ್ವದೇಶವನ್ನು ಪರಕೀಯರ ಆಕ್ರಮಣದಿಂದ ರಕ್ಷಿಸುವುದು ಮೊದಲನೆಯ ಕೆಲಸ. ಇದಲ್ಲದೆ ಹಿಂದುಸ್ಥಾನವು ಬ್ರಿಟಿಷ್ ಸೈನ್ಯದ ಸಹಾಯವನ್ನು ಇಂದಿನ ವರೆಗೆ ಪಡೆಯುತ್ತಿತ್ತು. ಇನ್ನುಮುಂದೆ ಸ್ವತಂತ್ರವಾದಕೂಡಲೇ ಸಂಪೂರ್ಣ ಭಾರತೀಯ ಸೈನ್ಯವನ್ನು ನಿರ್ಮಾಣ

ಮಾಡಿಕೊಳ್ಳಬೇಕಾಗಿದೆ. ಬ್ರಿಟಿಷರ ರಾಜಕೀಯ ಅಧಿಕಾರವಿಸರ್ಜನೆ ಯಾಗುವಂತೆ ಅವರ ಸೈನಿಕಬಲವು ಮುಗಿದುಹೋಗುವುದು. ಆದುದ ರಿಂದ ಸೈನ್ಯದ ಹಿಂದೀಕರಣ ಮಾಡಬೇಕಾಗುವುದು. ಆಧುನಿಕ ಶಾಸ್ತ್ರದ ತತ್ವಗಳಿಗನುಸರಿಸಿ ಬಲಾಢ್ಯವಾದ ರಾಷ್ಟ್ರೀಯ ದಳದ ನಿರ್ಮಾಣ ಮಾಡುವುದು ಅತ್ಯಾವಶ್ಯಕವಾಗಿದೆ. ಸೈನ್ಯದ ಹಿಂದೀಕರಣಕ್ಕಾಗಿ ಕೈಕೊಳ್ಳ ಬೇಕಾದ ಉಪಾಯಗಳನ್ನು ಸೂಚಿಸಲು ಸರ್ ಗೋಪಾಲಸ್ವಾಮಿ ಐಯಂಗಾರ ಅವರ ಅಧ್ಯಕ್ಷತೆಯಲ್ಲಿ ಒಂದು ಉಪಸಮಿತಿಯನ್ನು ಪ್ರಭು ತ್ವದವರು ನಿಯೋಜಿಸಿರುವರು. ಇದಲ್ಲದೆ ರಾಷ್ಟ್ರದ ಹಿತವನ್ನು ಅನುಲಕ್ಷಿಸಿ ಹಡಗುಪಡೆ, ಸೈನ್ಯ ಮತ್ತು ವಾಯುಬಲ ಇವುಗಳ ಹಿಂದೀಕರಣ ಮಾಡಲು ಯೋಗ್ಯ ಬಲವುಳ್ಳ ಸೈನ್ಯದ ರಚನೆಯಬಗ್ಗೆ ವಿಚಾರಣೆ ನಡೆಸಿ ೬ ತಿಂಗಳಲ್ಲಿ ವರದಿಯನ್ನು ಒಪ್ಪಿಸಬೇಕೆಂದು ಹೇಳಲಾಗಿದೆ. ಈ ಕೆಲಸವಲ್ಲಿ ಬ್ರಿಟಿಷ್ ಸೇನಾನಾಯಕರಿಂದ ಸಲಹೆ ಪಡೆಯಬಹುದೆಂದು ತಿಳಿಸಲಾಗಿದೆ. ಈ ಸಮಿತಿಯು ಮಾಡಬೇಕಾದ ಕೆಲಸದಲ್ಲಿ ಪ್ರಭುತ್ವದವರು ಸೂಚಿಸಿದ ವಿಷಯಗಳು ಕೆಳಗಿನಂತಿವೆ.

(೧) ಇಂದಿನ ರಾಷ್ಟ್ರೀಯ ದಳದಲ್ಲಿರುವ ಹಿಂದೀಏತರರ ಸ್ಥಳದಲ್ಲಿ ಹಿಂದೀ ಯರ ಯೋಜನೆ ಅಲ್ಪ ಅವಧಿಯಲ್ಲಿ ಮಾಡಲಿಕ್ಕೆ ಕೈಕೊಳ್ಳಬೇ ಕಾದ ಉಪಾಯಗಳು.

(೨) ಇಂದಿನ ಸೈನ್ಯದ ಸಂಪೂರ್ಣ ರಾಷ್ಟ್ರೀಕರಣ ಮಾಡುವುದು ಶಕ್ಯವಿದ್ದರೆ ಆ ಬಗ್ಗೆ ಒಂದು ನಿರ್ದಿಷ್ಟದಿನ ನಿಶ್ಚಯಮಾಡಬೇಕು.

(೩) ಯುದ್ಧಶಾಸ್ತ್ರದಲ್ಲಿ ನುರಿತ ಮತ್ತು ಆ ಕಲೆಯಲ್ಲಿ ನೈಪುಣ್ಯವನ್ನು ಪಡೆದ ಹಿಂದೀಏತರರನ್ನು ಕೆಲಸಕ್ಕೆ ಇಟ್ಟುಕೊಳ್ಳುವ ಅವಶ್ಯಕತೆ ಕಂಡುಬಂದರೆ ಆ ಬಗ್ಗೆ ಉಪಾಯಗಳನ್ನು ಸೂಚಿಸಬೇಕು.

(೪) ವಿಳಂಬ ಮಾಡದೆ ಹಿಂದಿಏತರ ಸ್ಥಳದಲ್ಲಿ ಹಿಂದೀಯರ ಯೋಜನೆ ಆಗಬೇಕಾದ ಖಾತೆ ಮತ್ತು ವ್ಯಕ್ತಿಗಳ ಪಟ್ಟಿಯನ್ನು ಸಿದ್ಧ ಪಡಿಸಬೇಕು.

ನಡುಗಾಲ ಪ್ರಭುತ್ವದ ಉಪಾಧ್ಯಕ್ಷರಾದ ಪ. ನೆಹರು ಅವರು ಮತ್ತು ರಕ್ಷಣೆಯ ಮಂತ್ರಿಗಳಾದ ಸರ್ದಾರ್ ಬಲದೇವಸಿಂಗರು ಒಂದು ಸಂಯುಕ್ತ ಹೇಳಿಕೆಯ ಮೂಲಕ ಹಿಂದೀಯ ತರುಣರನ್ನು ಕೇಳಿ ಕೊಂಡಿರುವರು. "ಪ್ರಪಂಚವು ಶಾಂತಿಮಯ ಪ್ರಗತಿ ಮಾಡಬೇಕೆಂದು ಹಿಂದುಸ್ಥಾನವು ಬಯಸುವುದು. ಜಗತ್ತಿನಲ್ಲಿ ಯುದ್ಧವು ಸಂಭವಿಸದಂತೆ ಮಾಡುವುದೇ ಅವರ ನೀತಿ. ಆದರೆ ಈ ಬಗ್ಗೆ ಜಗತ್ತಿನ ವ್ಯವಹಾರ ಮತ್ತು ಅಂತರರಾಷ್ಟ್ರೀಯ ಪರಿಸ್ಥಿತಿಗಳಲ್ಲಿ ಅನಕೂಲ ಪರಿವರ್ತನೆ ಯಾಗುವ ತನಕ ಪರಚಕ್ರಗಳ ಆಕ್ರಮಣದಿಂದ ಮಾತೃಭೂಮಿಯನ್ನು ರಕ್ಷಿಸುವುದು ನಮ್ಮ ಪರಮ ಕರ್ತವ್ಯ. ಆದುವರಿಂದ ಬಲಾಢ್ಯವಾದ ಸೈನ್ಯದ ನಿರ್ಮಾಣ ಅತ್ಯಾವಶ್ಯಕವಾಗಿದೆ. ನೌಕಾಬಲ, ವಾಯುಬಲ, ಸೈನ್ಯ ಇವುಗಳು ಶ್ರೇಷ್ಠ ತರಗತಿಯವು ಆಗಬೇಕು."

"ರಾಷ್ಟ್ರೀಯ ದಳ ರಾಷ್ಟ್ರೀಯ ನಾಯಕರಿಂದ ನಿಯಂತ್ರಿಸಲ್ಪಡ ಬೇಕು. ಈ ನಾಯಕರು ಒಳ್ಳೆಯ ಶೂರರಾಗಿರುವುದು ಅತ್ಯಾವಶ್ಯಕ. ಈ ರಾಷ್ಟ್ರೀಯ ದಳವು ಹಿಂದುಸ್ಥಾನದ ಶ್ರೇಷ್ಠತೆಯನ್ನು ವ್ಯಕ್ತಪಡಿಸುತ್ತ ಸ್ವತಂತ್ರ ಹಿಂದುಸ್ಥಾನದ ಯೋಗ್ಯ ಸೈನ್ಯವೆಂದು ಸಿದ್ಧಪಡಿಸಬೇಕು. ಈ ಮಹತ್ವಪೂರ್ಣ ರಾಷ್ಟ್ರೀಯ ಕಾರ್ಯದಲ್ಲಿ ಎಲ್ಲ ಜಾತಿಯ ಶ್ರೇಷ್ಠ ಜನರು ಸೇರಬೇಕೆಂದು ನಾವು ಬಿನ್ನವಿಸಿಕೊಳ್ಳುತ್ತೇವೆ."

ಶಾಸನ ಮತ್ತು ಸುವ್ಯವಸ್ಥೆ ಇವು ಪ್ರಾಂತೀಯ ಪ್ರಭುತ್ವಕ್ಕೆ ಸಂಬಂಧಪಟ್ಟ ವಿಷಯಗಳು. ಪ್ರತಿಯೊಂದು ಪ್ರಾಂತದಲ್ಲಿ ಶಾಂತತೆಯನು

ಕಾಪಾಡಿಕೊಳ್ಳುವುದು ಅಲ್ಲಿಯ ಪ್ರಭುತ್ವದ ಕೆಲಸ. ಕೇಂದ್ರಪ್ರಭುತ್ವಕ್ಕೆ ಅದರಲ್ಲಿ ಕೈಹಾಕಲಿಕ್ಕೆ ಬರುವುದಿಲ್ಲ. ಆದರೂ ಕೇಂದ್ರ ಪ್ರಭುತ್ವದ ಗೃಹ ಮಂತ್ರಿಗಳಾದ (ಶಾಸನ ಸುವ್ಯವಸ್ಥೆಯನ್ನು ಕಾಪಾಡುವ) ಸರದಾರ್ ವಲ್ಲಭಭಾಯಿ ಪಟೇಲ ಅವರು ಈ ಬಗ್ಗೆ ಸಾಮಾನ್ಯ ನೀತಿಯನ್ನು ಪ್ರತಿಪಾದಿಸಿರುವರು. "ರಕ್ಷಣೆಗಾಗಿ ನೀವು ಸೈನ್ಯ ಅಥವಾ ನಗರ ರಕ್ಷಕರನ್ನು ಆಶ್ರಯಿಸಬೇಡಿರಿ. ಸ್ವತಂತ್ರ ಹಿಂದುಸ್ಥಾನದಲ್ಲಿ ಪ್ರತಿಯೊಬ್ಬ ಮನುಷ್ಯನು ನಗರ ರಕ್ಷಕನು (ಪೋಲಿಸ) ಆಗಬೇಕು ತನ್ನ ಮತ್ತು ನೆರೆಹೊರೆಯುವರ ರಕ್ಷಣೆ ಮಾಡುವದನ್ನು ಕಲಿಯಬೇಕು. ಮಹಾತ್ಮಾ ಗಾಂಧಿ ಅವರು ಹೇಳಿದಂತೆ ಅಹಿಂಸೆಯಿಂದ ನಿಮ್ಮ ಮೇಲೆ ಏರಿ ಬರುವವರನ್ನು ಎದುರಿಸಬೇಕು. ಅದು ಅಶಕ್ಯವಾದರೆ ಹಿಂಸೆಯಿಂದಾದರೂ ಆತ್ಮರಕ್ಷಣೆ ಮಾಡಿಕೊಳ್ಳಲು ಅಡ್ಡಿಯಿಲ್ಲ. ಆದರೆ ಹೇಡಿಗಳಂತೆ ಎಂದಿಗೂ ಓಡಿಹೋಗಬಾರದು. ನಾನು ಹೇಡಿಗಳನ್ನು ಅತ್ಯಂತವಾಗಿ ಧಿಕ್ಕರಿಸುತ್ತೇನೆ."

ರಾಷ್ಟ್ರನಿರ್ಮಾಣದ ವ್ಯವಹಾರಗಳನ್ನು ಕೈಕೊಂಡು ನಡುಗಾಲ ಪ್ರಭುತ್ವದವರು ಹಿಂದುಸ್ಥಾನವನ್ನು ಆದರ್ಶ ರಾಷ್ಟ್ರವನ್ನಾಗಿ ಮಾಡುವ ಹಂಬಲ ಆಶಿಸಲಾಗಿದೆ. ಆರ್ಥಿಕ, ಶೈಕ್ಷಣಿಕ ಮತ್ತು ಆರೋಗ್ಯದಾಯಕ ವಿಷಯಗಳ ಬಗ್ಗೆ ದೊಡ್ಡ ದೊಡ್ಡ ಯೋಜನೆಗಳನ್ನು ಹಾಕಿಕೊಳ್ಳುವವರು. ಅವುಗಳಲ್ಲಿ ಶೈಕ್ಷಣಿಕ ಯೋಜನೆ ಗಮನಾರ್ಹವಾಗಿದೆ. "ಕೇಂದ್ರ ಪ್ರಭುತ್ವದ ಐದುವರ್ಷದ ಶಿಕ್ಷಣದ ಯೋಜನೆ ಪ್ರಾಂತೀಯ ಪ್ರಭುತ್ವದ ಆ ಯೋಜನ ಪೂರೈಕೆಯಲ್ಲಿ ಸಹಾಯಮಾಡುವುದು. ಸಾರ್ಜಂಟ ಯೋಜನೆ ಎಂದು ಪ್ರಸಿದ್ಧಿಹೊಂದಿದ, ಕೇಂದ್ರದ ಸಲಹೆ ಮಂಡಳಿಯ ಶೈಕ್ಷಣಿಕ ಯೋಜನೆಯ ಧೇಯ ತತ್ವಗಳನ್ನು ಈ ಪ್ರಭುತ್ವವು

ಸಾಮಾನ್ಯವಾಗಿ ಒಪ್ಪಿಕೊಂಡಿದೆ. ಮತ್ತು ಪ್ರಾಂತೀಯ ಪ್ರಭುತ್ವಗಳಿಗೆ ಆ ಪ್ರಕಾರ ಕಾರ್ಯವನ್ನು ಆರಂಭ ಮಾಡಲಿಕ್ಕೆ ತಿಳಿಸಲಾಗಿದೆ. ಕೇಂದ್ರ ಮತ್ತು ಪ್ರಾಂತೀಯ ಪ್ರಭುತ್ವಗಳು ಕೈಕೊಳ್ಳಬೇಕಾದ ಶಿಕ್ಷಣ ಪ್ರಚಾರದ ಈ ಯೋಜನೆಗಾಗಿ ಒಂದುನೂರು-ಇಪ್ಪತ್ತೈದು ಕೋಟಿ ರೂಪಾಯಿಗಳ ವೆಚ್ಚ ಬರಬಹುದು" ಎಂದು ಶಿಕ್ಷಣ ಮಂತ್ರಿಗಳಾದ ಶ್ರೀ. ಸಿ. ರಾಜಗೋಪಾಲಾಚಾರ್ಯರು ಹೇಳಿರುವರು.

ಪ್ರಾಂತಗಳಲ್ಲಿ ಸ್ವಾಯತ್ತತೆಯ ಸ್ಥಾಪನೆಯಾಗದ್ದಕಾರಣ ನಡುಗಾಲ ಪ್ರಭುತ್ವಕ್ಕೆ ಪ್ರಾಂತೀಯ ವಿಷಯಗಳಲ್ಲಿ ಕೈ ಹಾಕಲಿಕ್ಕೆ ಬರುವುದಿಲ್ಲ. ರಕ್ಷಣೆ, ವಿದೇಶಿಯ ವ್ಯವಹಾರಗಳು, ಅರಿಕೆ ಈ ಶಾಖೆಗಳು ಕೇಂದ್ರ ಪ್ರಭುತ್ವದ ವಿಷಯಗಳು. ಇವುಗಳನ್ನುಳಿದು ಪ್ರಾಂತೀಯ ವಿಷಯಗಳು ಪ್ರಾಂತೀಯ ಪ್ರಭುತ್ವಕ್ಕೆ ಸಂಬಂಧ ಪಟ್ಟಿವೆ. ಬೆಂಗಾಲ ಬಿಹಾರ ಮುಂತಾದ ಪ್ರಾಂತಗಳಲ್ಲಿ ಜಾತಿಯ ಕಲಹಗಳಿಂದ ಎಷ್ಟು ಅನಾಹುತ ವಾಯಿತೆಂಬ ಸಂಗತಿ ಎಲ್ಲರಿಗೆ ಗೊತ್ತುಂಟು. ಆದರೆ ಕೇಂದ್ರ ಪ್ರಭುತ್ವಕ್ಕೆ ಆ ಪ್ರಾಂತಗಳಲ್ಲಿ ಶಾಂತತೆಯನ್ನು ಸ್ಥಾಪಿಸಲಿಕ್ಕೆ ಯಾವ ಉಪಾಯಗಳನ್ನು ಕೈಕೊಳ್ಳಲಿಕ್ಕೆ ಬರುವಂತೆ ಇದ್ದಿಲ್ಲ. ಈಗಿನ ಕೇಂದ್ರ ಪ್ರಭುತ್ವ ದುರ್ಬಲ ವಿರುವುದು ಪ್ರಾಂತೀಯ ವಿಷಯಗಳ ಬಗ್ಗೆ ಅದಕ್ಕೆ ಇನ್ನು ಕೆಲವು ಅಧಿಕಾರಗಳನ್ನು ಕೊಟ್ಟು ಕೇಂದ್ರ ಪ್ರಭುತ್ವವನ್ನು ಬಲಿಷ್ಟವಾಗಿ ಮಾಡಬೇಕೆಂದು ಕೆಲವರು ಅಭಿಪ್ರಾಯ ಪಡುವರು.

ನಡುಗಾಲ ಪ್ರಭುತ್ವ ಮತ್ತು ದೇಶೀಯ ಸಂಸ್ಥಾನಗಳಲ್ಲಿ ಏನಾದರೂ ರಾಜಕೀಯ ಸಂಬಂಧ ಇರುವದೋ ಎಂಬ ಮತ್ತೊಂದು ಘಟನಾತ್ಮಕ ಪ್ರಶ್ನೆ ಈಗ ತಲೆದೂರುತ್ತಿರುವುದು. ಈ ಬಗ್ಗೆ ರಾಜಕಾರಣ ಧುರಂದರರದಲ್ಲಿ

ಭಿನ್ನಾಭಿಪ್ರಾಯವಾಗಿದೆ. ನಡುಗಾಲ ಪ್ರಭುತ್ವ ಮತ್ತು ದೇಶೀಯ ಸಂಸ್ಥಾನಗಳಲ್ಲಿ ಯಾವ ರಾಜಕೀಯ ಸಂಬಂದ ಇರುವುದಿಲ್ಲ. ಆದುದರಿಂದ ಕೇಂದ್ರ ಪ್ರಭುತ್ವಕ್ಕೆ ಅವುಗಳ ಬಗ್ಗೆ ಯಾವ ರಾಜ್ಯಾಧಿಕಾರವು ಪ್ರಾಪ್ತವಾಗಲಾರದು. ಅದರ ಕಾರಣಗಳು ಕೆಳಗಿನಂತಿವೆ:—

೧. ಮಕುಟದ ಕಾರ್ಯಚಿಂತಕರಾಗಿದ್ದ ಈಸ್ಟ ಇಂಡಿಯಾ ಕಂಪನಿಯ ಸಂಗಡ ದೇಶೀಯ ಸಂಸ್ಥಾನಗಳು ಒಪ್ಪಂದಗಳನ್ನು ಮಾಡಿಕೊಂಡಿದ್ದವು. ೨. ೧೮೫೮ ನೆಯ ಶಾಸನದ ಪ್ರಕಾರ ದೇಶೀಯ ಸಂಸ್ಥಾನಗಳ ಸಂಬಂಧ ಮಕುಟದ ಸಂಗಡ ಇರುವಂತೆ ನಿರ್ಣಯಿಸಲಾಗಿದೆ. ೩. ಭಾರತದ ಸಚಿವರು ಅಥವಾ ವೈಸ್‌ರಾಯರು ಸಂಸ್ಥಾಗಳ ಬಗ್ಗೆ ಯಾವ ಅಂತಿಮ ನಿರ್ಣಯ ಕೊಡಲಾರರು. ಇದಕ್ಕೆ ವಿರುದ್ಧವಾಗಿ ದೇಶೀಯ ಸಂಸ್ಥಾನಗಳು ನಡುಗಾಲ ಪ್ರಭುತ್ವದೊಡನೆ ಸಂಬಧ ಬೆಳಿಸಿಕೊಳ್ಳಬಹುದೆಂದು ಮತ್ತು ಕೆಲವರು ವಾದಿಸುವರು. ಅವರು ಮುಂದಿನಂತೆ ಹೇಳುವರು. ೧. ಹಿಂದುಸ್ಥಾನದ ಪ್ರಭುತ್ವ ವೆಂದರೆ ಸಭೆಯಿಂದ ಯುಕ್ತರಾದ ಗೌರ್ನರ ಜನರಲ್ ಅವರು. ಮಕುಟದ ಸಂಗಡ ಪ್ರತ್ಯಕ್ಷವಾದ ಯಾವ ಸಂಬಂಧವಿಲ್ಲ. ೨. ಹಿಂದುಸ್ಥಾನದ ಬಗ್ಗೆ ಸಭೆಯಿಂದ ಯುಕ್ತರಾದ ಗೌರ್ನರ ಜನರಲ್ ಅವರಿಗೆ ಸಂಪೂರ್ಣ ಅಧಿಕಾರಗಳಿರುವವು. ಆದುದರಿಂದ ದೇಶಿಯ ಸಂಸ್ಥಾನಗಳು ಇಂದಿನ ನಡುಗಾಲ ಪ್ರಭುತ್ವದ ಸಂಗಡ ರಾಜಕೀಯ ಸಂಬಂಧ ಇಡಬೇಕೆಂದು ಹೇಳುವರು.

ಆಧುನಿಕ ಕಾಲದಲ್ಲಿ ವಿದೇಶೀಯ ರಾಜತಂತ್ರಕ್ಕೆ ಅತ್ಯಂತ ಮಹತ್ವ ಪ್ರಾಪ್ತವಾಗಿದೆ. ಅಂತರ ರಾಷ್ಟ್ರೀಯ ದೃಷ್ಟಿಯಿಂದ, ಆಧಿಪತ್ಯ ಉಳ್ಳ ಸ್ವತಂತ್ರ ರಾಷ್ಟ್ರಗಳೊಡನೆ ಸಂಬಂದಗಳನ್ನು ಬೆಳಸಿಕೊಂಡರೆ, ಆರ್ಥಿಕ ಸೌಕರ್ಯಗಳು ಪ್ರಾಪ್ತವಾಗುವವಲ್ಲದೆ ರಾಜಕೀಯ ದೃಷ್ಟಿಯಿಂದಲೂ

ಅನುಕೂಲವಾಗುವುದು. ಹಿಂದುಸ್ಥಾನಕ್ಕೆ ಇಂದು ಜಗತ್ತಿನ ಸ್ವತಂತ್ರ ರಾಷ್ಟ್ರಗಳ ಸಂಗಡ ರಾಜಕೀಯ ಸಂಬಂದಗಳನ್ನು ಬೆಳಸಿ, ಒಂದು ಸ್ವತಂತ್ರವಾದ ವಿದೇಶೀಯ ನೀತಿಯನ್ನು ಹಾಕಿಕೊಳ್ಳಬೇಕಾಗಿದೆ. ಇದಲ್ಲದೆ ಏಷಿಯಾಖಂಡದ ದೇಶಗಳೊಡನೆ ಸ್ನೇಹ ಸೌಹಾರ್ದ್ಯಗಳನ್ನು ಬೆಳಿಸಿ ಸ್ವತಂತ್ರ ಮತ್ತು ಸಂಯುಕ್ತ ಏಷಿಯಾ ಖಂಡದ ನಿರ್ಮಾಣಕ್ಕಾಗಿ ಪ್ರಯತ್ನ ಪಡಬೇಕಾಗಿದೆ. ಈ ಮಹತ್ಕಾರ್ಯ ಸಾಧನೆಗಾಗಿ ಹಿಂದು ಸ್ಥಾನವೇ ಏಷಿಯಾ ಖಂಡದ ರಾಷ್ಟ್ರಗಳಿಗೆ ಮಾರ್ಗದರ್ಶನ ಮಾಡಬೇಕು. ಈ ಬಗ್ಗೆ ಬಾಹ್ಯ ವ್ಯವಹಾರಗಳ ಮಂತ್ರಿಗಳಾದ ಪ. ನೆಹರು ಅವರು ಹೇಳಿದ ವಿದೇಶಿಯ ರಾಜ್ಯತಂತ್ರ ಗಮನಾರ್ಹವಾಗಿದೆ.

"ಭಾರತವು ಸ್ವತಂತ್ರವಾದ ವಿದೇಶೀಯ ನೀತಿಯನ್ನು ಅನುಸರಿಸುವುದು. ಅದು ಪರಾಧೀನವಾದ ಜನತೆಯ ಸ್ವಾತಂತ್ರ್ಯದ ತತ್ವವನ್ನೇ ಸಮರ್ಥನೆ ಮಾಡುವುದು. ಭಿನ್ನ ಭಿನ್ನ ಜನಾಂಗಗಳಲ್ಲಿರುವ ಪರಸ್ಪರ ವೈಷಮ್ಯವನ್ನು ತೆಗೆದುಹಾಕಲು ಪ್ರಯತ್ನಿಸುವುದು. ಶಾಂತಿಪ್ರಿಯ ಜನತೆಗಳೊಡನೆ ಸಹಕರಿಸಿ ಒಂದು ರಾಷ್ಟ್ರವು ಮತ್ತೊಂದು ರಾಷ್ಟ್ರದ ಮೇಲೆ ಆಕ್ರಮಣ ಮಾಡದಂತೆ ಪ್ರತಿಬಂಧನೆ ಮಾಡಲಿಚ್ಛಿಸುವದು. ಸಾರಾಂಶ ಭಾರತವು ಎಲ್ಲ ವಸಾಹತಿಗಳ ಮತ್ತು ಪರಾಧೀನ ಜನಾಂಗಗಳ ಸ್ವಾತಂತ್ರ್ಯವನ್ನೇ ತನ್ನ ಧ್ಯೇಯವನ್ನಾಗಿ ಇಟ್ಟುಕೊಂಡಿದೆ."

"ಸಂಯುಕ್ತ ರಾಷ್ಟ್ರಗಳ ಸಂಘದ ಸಮ್ಮೇಳನದ ಪರವಾಗಿ ಬಂದ ಔತಣವನ್ನು ಸ್ವೀಕರಿಸಿ, ಶ್ರೀಮತಿ ವಿಜಯಲಕ್ಷ್ಮಿ ಪಂಡಿತ್ ಅವರ ನೇತೃತ್ವದಲ್ಲಿ ಶ್ರೀಗಳಾದ ಕೆ.ಪಿ. ಎಸ್. ಮೆನನ್, ಫ್ರ್ಯಾಂಕ ಆಂಟೋನಿ, ನ್ಯಾಯಮೂರ್ತಿ ಚಾಗ್ಲಾ ಮತ್ತು ಅಲಿಯಾವರಜಂಗ್ ಈ ಸದಸ್ಯರಿಂದೊಡಗೂಡಿದ ಒಂದು ಪ್ರತಿನಿಧಿ ಮಂಡಳಿಯನ್ನು ಅಮೇರಿಕಾ ದೇಶಕ್ಕೆ

ಕಳಿಸಲಾಗಿದೆ. ದಕ್ಷಿಣ ಆಫ್ರಿಕಾದಲ್ಲಿರುವ ಹಿಂದೀಯರ ಸಮಸ್ಯವನ್ನು ಬಿಡಿಸಲಿಕ್ಕೆ ಈ ಮಂಡಳಿಯು ಪ್ರಯತ್ನ ಪಡುವುದು. ಇದು ಮಾನವ ಮತ್ತು ನೈತಿಕ ವಿಷಯ. ಅದಕ್ಕೆ ಅಂತರ ರಾಷ್ಟ್ರೀಯ ಮಹತ್ವ ಪ್ರಾಪ್ತ ವಾಗಿದೆ. ಈಗಾಗಲೆ ಹಿಂದುಸ್ಥಾನಕ್ಕೆ ಕೆಲವುಮಟ್ಟಿಗೆ ಯಶ ಪ್ರಾಪ್ತ ವಾಗಿ, ಮುಂದಿನ ವಿಚಾರಣೆಗಾಗಿ ಒಂದು ಉಪಸಮಿತಿ ಸ್ಥಾಪಿತವಾಗಿದೆ. ಈ ವಿಜಯದ ಶ್ರೇಯ ಶ್ರೀಮತಿ ವಿಜಯಲಕ್ಷ್ಮಿ ಪಂಡಿತರಿಗೆ ಸಲ್ಲುವದು. ಈ ಕಾರ್ಯದಲ್ಲಿ ನಮಗೆ ಸಹಾಯ ಮಾಡಿದ ಪಾಶ್ಚಾತ್ಯ ರಾಷ್ಟ್ರಗಳಿಗೆ ನಾವು ಋಣಿಯಾಗಿದ್ದೇವೆ" ಎಂದು ಪ. ನೆಹರು ಅವರು ಹೇಳಿದರು.

"ಹಿಂದುಸ್ಥಾನವು ಅಂತರ ರಾಷ್ಟ್ರೀಯ ಮಟ್ಟವನ್ನು ಮುಟ್ಟಿದ ಕೂಡಲೇ ಎಲ್ಲ ರಾಷ್ಟ್ರಗಳೊಡನೆ ಒಳ್ಳೆಯ ಸಂಬಂಧವನ್ನಿಟ್ಟುಕೊಳ್ಳುವುದು. ವಿಶೇಷವಾಗಿ ಏಷಿಯಾ ಖಂಡದ ರಾಷ್ಟ್ರಗಳೊಡನೆ ಹೆಚ್ಚಿನ ಸಂಬಂಧ ಗಳನ್ನು ಬೆಳೆಸುವುದು. ಮಧ್ಯಪೂರ್ವ ರಾಷ್ಟ್ರಗಳಿಗೆ ಮೈತ್ರೀಯ ಶುಭ ಚಿಂತನೆಯ ಮಂಡಳಿಯನ್ನು ಕಳಿಸಿ ಕೊಡುವುದು. ಇದು ಮಹತ್ವಪೂರ್ಣ ವಿಷಯವಾಗಿದೆ. ಬ್ಯಾಂಕಾಕ್ ಮತ್ತು ಸಾಯಗಾಂಗಳಲ್ಲಿ ಕ್ರಮವಾಗಿ ಭಾರತೀಯ ರಾಯಭಾರಿ ಮತ್ತು ಉಪರಾಯಭಾರಿಗಳನ್ನು ನಿಯೋಜಿಸಲಾಗುವುದು."

ಏಷಿಯಾ ಖಂಡದ ನೆರೆಯ ರಾಷ್ಟ್ರಗಳ ವಿಷಯಗಳ ಬಗ್ಗೆ ತಮ್ಮ ನೀತಿಯನ್ನು ವ್ಯಕ್ತಮಾಡುತ್ತ, ಪ್ಯಾಲೆಸ್ಟೈನ, ಈರಾನ, ಇಂಡೋನೇಷಿಯಾ ಚೀಣ ಮುಂತಾದ ದೇಶಗಳಲ್ಲಿ ಆಗುತ್ತಿರುವ ಬದಲಾವಣೆಗಳನ್ನು ಕೂಲಂಕಷವಾಗಿ ತಿಳಿದು, ಆ ದೇಶಗಳಲ್ಲಿ ಆಂತರಿಕ ಶಾಂತತೆಯನ್ನು ಸ್ಥಾಪಿಸಲು ಭಾರತವು ಸಹಕರಿಸುವುದೆಂದು ಪಂಡಿತಜಿ ಅವರು ಹೇಳಿರುವರು.

ಭಾರತವು ಅಮೇರಿಕಾ ದೇಶದ ಸಂಯುಕ್ತ ರಾಷ್ಟ್ರಗಳು ಮತ್ತು ಚೀನದೇಶ ಇವುಗಳೊಂದಿಗೆ ಇಗಾಗಲೆ ವಿದೇಶೀಯ ಸಂಬಂಧ ವನ್ನಿಟ್ಟಿದೆ. ಈ ಸಂಬಂಧವನ್ನು ಪರಸ್ಪರ ಪ್ರತಿನಿಧಿಗಳ ನಿಯೋಜನೆ ಯಿಂದ ಭದ್ರ ಪಡಿಸಬೇಕು. ವಾಷಿಂಗಟನ್ ಮತ್ತು ನಾನ್‌ಕಿಂಗ್ ಈ ಪಟ್ಟಣಗಳಲ್ಲಿ ಮುಖ್ಯ ಕಾರ್ಯಚಿಂತಕರ ಸ್ಥಳದಲ್ಲಿ ರಾಯಭಾರಿ ಗಳನ್ನು ನಿಯೋಜಿಸಲಾಗುವುದು. ಈಗಾಗಲೆ ಮಿ. ಆಸಫ್‌ಅಲಿ ಅವರನ್ನು ವಾಷಿಂಗಟನ್‌ದಲ್ಲಿ ರಾಯಭಾರಿಯನ್ನಾಗಿ ನಿಯೋಜಿಸಲಾಗಿದೆ ಎಂದು ಪ್ರಕಟನೆಯಾಗಿದೆ. ರಷಿಯಾ ಮುಂತಾದ ಯುರೋಪಿಯನ್ ರಾಷ್ಟ್ರ ಗಳೊಂದಿಗೆ ಸಂಬಂಧವನ್ನು ಇಟ್ಟು ಮುಂದೆ ಯಾವವಿಧವಾದ ರಾಜ್ಯ ತಂತ್ರವನ್ನು ನಡೆಸಬೇಕೆಂಬುದು ನಿಶ್ಚಯಿಸಲಾಗುವುದು.

ಬ್ರಿಟಿಷ್ ಸಾಮ್ರಾಜ್ಯ ಮತ್ತು ಇನ್ನಿತರ ರಾಷ್ಟ್ರಗಳಲ್ಲಿ ಪರರಾಷ್ಟ್ರ ರಾಜತಂತ್ರ ಮತ್ತು ವ್ಯಾಪಾರೋದ್ಯೋಗಗಳ ಸಂಬಂಧವನ್ನು ಬೆಳಿಸಿ ಸ್ವತಂತ್ರ ಪ್ರತಿನಿಧಿಗಳನ್ನು ನಿಯೋಜಿಸಬೇಕಾಗಿದೆ. ಈ ಬಗ್ಗೆ ಒಂದು ಯೋಜನೆ ಸಿದ್ಧಪಡಿಸಲಾಗಿದೆ. ಮಂತ್ರಿಮಂಡಳಿಯ ಒಪ್ಪಿಗೆ ಪಡೆದ ಮೇಲೆ ಆ ಯೋಜನೆ ಕಾರ್ಯರೂಪದಲ್ಲಿ ಬರುವುದು. ಈ ಕಾರ್ಯ ದಲ್ಲಿ ವಿವಿಧ ಅಧಿಕಾರಗಳನ್ನು ವಹಿಸಲು ಹಿಂದುಸ್ಥಾನಕ್ಕೆ ಸುಮಾರು ೩೦೦ ಜನರು ಬೇಕಾಗಿದ್ದಾರೆ. ಪರದೇಶಗಳಲ್ಲಿ ಸ್ವತಂತ್ರವಾಗಿ ಪ್ರಾತಿ ನಿಧ್ಯವನ್ನು ಮಾಡಲೋಸುಗ ಉತ್ತಮ ಯೋಗ್ಯತೆಯುಳ್ಳ ಜನರ ಅವಶ್ಯಕತೆಯಿದೆ. ಜೀವನದ ವಿವಿಧ ಅನುಭವ ಮತ್ತು ಯೋಗ್ಯತೆ ಉಳ್ಳ ಜನರ ಆಯ್ಕೆ ಆಗಬೇಕಾಗಿದೆ.

ಪಂಡಿತ ನೆಹರು ಅವರು ಬ್ರಹ್ಮದೇಶದಲ್ಲಿ ಜನರಲ್ ಯೊಂಗ್‌ಸಾಂಗ್ ಅವರ ನೇತೃತ್ವದಲ್ಲಿ ಸ್ಥಾಪಿತವಾದ ನಡುಗಾಲ ಪ್ರಭುತ್ವಕ್ಕೆ ಅಭಿನಂದನೆ

ಗಳನ್ನಪೇಕ್ಷಿಸುತ್ತ, ಅವರ ಸಂಪೂರ್ಣ ಸ್ವಾತಂತ್ರ್ಯ ಮತ್ತು ಭಾರತ ದೊಂದಿಗೆ ಹಿತಸಂಬಂಧಗಳನ್ನು ಕೋರಿದರು. ಇವಲ್ಲದೆ ಹೊಸ ಗೌವ ರ್ನರರಿಗೆ ಅಲ್ಲಿಯ ಭಾರತೀಯರ ವಿರುದ್ಧ ಆರೋಪುಗಳನ್ನು ಹಿಂದೆಗೆ ದುದಕ್ಕೆ ಕೃತಜ್ಞತೆಯನ್ನು ಸಲ್ಲಿಸಿರುವರು.

ಪಂಡಿತ ನೆಹರು ಅವರು ಇಂಡೊನೇಷಿಯದ ಸ್ವಾತಂತ್ರ್ಯದ ಬಗ್ಗೆ ಮಾತಾಡುತ್ತ, ಅಲ್ಲಿಯ ಜನರಿಗೆ ಎಲ್ಲ ವಿಧವಾದ ಸಹಾಯವನ್ನು ತಾವು ನೀಡುವುದಾಗಿ ಹೇಳಿರುವರು. ಈಗ ಒಂದು ರಾಷ್ಟ್ರವು ಇನ್ನೊಂದು ರಾಷ್ಟ್ರದ ಸ್ವಾತಂತ್ರ್ಯವನ್ನು ಒಪ್ಪುವಂತೆ ಭಾರತದ ನಡುಗಾಲ ಪ್ರಭು ತ್ವವು ಇಂಡೊನೇಷಿಯದ ಪ್ರಜಾರಾಜ್ಯವನ್ನು ಒಪ್ಪದಿದ್ದರೂ, ಕಾರ್ಯ ರೂಪದಲ್ಲಿ ಅದನ್ನು ಸ್ವೀಕರಿಸಿದೆಂದು ಹೇಳಿದರು.

ಪರದೇಶದಲ್ಲಿರುವ ಭಾರತೀಯ ಸೈನ್ಯವನ್ನು ಹಿಂತೆಗೆದುಕೊಳ್ಳ ಲಾಗುವುದೆಂದು ನಡುಗಾಲ ಪ್ರಭುತ್ವಕ್ಕೆ ಆಶ್ವಾಸನ ಕೊಡಲಾಗಿತ್ತು. ಪರರಾಷ್ಟ್ರಗಳ ರಾಷ್ಟ್ರೀಯ ಆಂದೋಲನದ ವಿರುದ್ಧ ಅಥವಾ ಅವುಗಳ ಸಂರಕ್ಷಣೆಗಾಗಿ ಭಾರತದ ಸೈನ್ಯದ ಉಪಯೋಗವನ್ನು ನಡುಗಾಲ ಪ್ರಭುತ್ವದವರು ವಿರೋಧಿಸುವರು. ನವೆಂಬರ್ ಮುಗಿಯುವುದರೊಳ ಗಾಗಿ ಇಂಡೊನೇಷಿಯದಿಂದ ಭಾರತೀಯ ಸೈನ್ಯವನ್ನು ಹಿಂತೆಗೆದು ಕೊಳ್ಳುವುದಾಗಿ ಆಶಿಸಿದರು. ಆ ಪ್ರಕಾರ ಆಚರಿಸಲಾಗಿದೆ.

ಸಿಲೋನಕ್ಕೆ ಹೋಗಲು ಸರ್ವಪ್ರಯತ್ನ ಮಾಡುವುದಾಗಿ ಪಂಡಿತ ನೆಹರು ಅವರು ಹೇಳಿರುವರು, ಆವರು ಯಾವಾಗ ಹೋಗುವರೆಂಬುದು ನಿಶ್ಚಯವಾಗಿಲ್ಲ. ಸಿಲೋನದ ಜನತೆಯನ್ನು ಮತ್ತು ಅಲ್ಲಿಯ ಪ್ರಭು ತ್ವವನ್ನು ಭಾರತವು ಸ್ನೇಹಭಾವನೆಯಿಂದ ಕಾಣುವುದು. ಏಕೆಂದರೆ ಅದರ ಭವಿತವ್ಯವು ಭಾರತದೊಂದಿಗೆ ಒಟ್ಟುಗೂಡಿ ಸಾಗುವುದು ಅನಿ ವಾರ್ಯವಾದುದು.

ಉತ್ತರ ಪಶ್ಚಿಮ ಗಡಿನಾಡಿನ ಜನಾಂಗಗಳ ಸಮಸ್ಯೆಗಳನ್ನು ಸಾಧ್ಯವಾದಷ್ಟು ಮಟ್ಟಿಗೆ ಎಲ್ಲ ಬಗೆಯಿಂದ ವಿವೇಚಿಸುವುದಾಗಿ ಪಂಡಿತ ನೆಹರು ಅವರು ಹೇಳಿರುವರು. ಅಖಿಲ ಭಾರತದ ದೃಷ್ಟಿಯಿಂದ ಇದು ಮುಖ್ಯವಾದ ಸಮಸ್ಯೆಯಾಗಿದೆ. ಏಕೆಂದರೆ ವಾಯುವ್ಯ ಭಾಗವು ಭಾರತಕ್ಕೆ ಹೆಬ್ಬಾಗಿಲು. ಆದುದರಿಂದ ಭಾರತದ ರಕ್ಷಣೆಯು ಗಡಿನಾಡಿನ ಜನಾಂಗಗಳನ್ನೇ ಸೇರಿರುತ್ತದೆ. ಈ ಸಮಸ್ಯೆಯ ವಿವೇಚನೆಯಿಂದ ಆ ಜನಾಂಗಗಳ ಈಗಿರುವ ಸ್ವಾತಂತ್ರ್ಯಕ್ಕೆ ಯಾವವಿಧವಾದ ಹಾನಿಯುಂಟಾಗುವದಿಲ್ಲ. ಅವರನ್ನು ಹೊಸಯೋಜನೆಗೆ ಒಳಪಡಿಸುವುದಿಲ್ಲವೆಂದು ಹೇಳಿರುವರು. ಆದರೆ ಸ್ನೇಹ ಭಾವನೆಯಿಂದ ಆ ಜನಾಂಗಗಳ ಆರ್ಥಿಕ ಎಡರುಗಳನ್ನು ನಿವಾರಿಸಿ, ಪರಸ್ಪರ ಸ್ನೇಹ ಸಂಬಂಧಗಳನ್ನು ಹೆಚ್ಚಿಸುವುದಾಗಿ ಹೇಳಿರುವರು.

ಬಲುಚಿಸ್ಥಾನದ ಸುಧಾರಣೆಗಳು ಮಹತ್ವಪೂರ್ಣವಾಗಿವೆ. ನೂತನ ಭಾರತೀಯ ರಾಜ್ಯಾಂಗದಲ್ಲಿ ಪ್ರವೇಶ ಮತ್ತು ಭಾವೀ ಬಲುಚಿಸ್ಥಾನದ ಆಡಳಿತ ಇವುಗಳು ಘಟನಾ ಸಮಿತಿಯಲ್ಲಿ ವಿವಿಧ ಡಗಳ ಅನುಮತಿಯಂತೆ ನಿರ್ಣಯಿಸಲಾಗುವುವು. ಆದರೆ ಅದರ ರಾಜಕೀಯ ಬೆಳವಣಿಗೆಯ ಹಿನ್ನಡೆಯ ದೃಷ್ಟಿಯಿಂದ ಒಂದು ಸಲಹೆ ಸೂಚಕ ಮಂಡಲವು ಅಲ್ಲಿಯ ವಿವಿಧ ಸಂಸ್ಥೆಗಳ ಪ್ರತಿನಿಧಿಗಳಿಂದ, ಕಾರ್ಯಚಿಂತಕರಿಗೆ ಸಹಾಯಮಾಡಲು, ರಚಿಸಲಾಗುವುದು. ಇದು ಪ್ರಜಾಸತ್ತಾತ್ಮಕ ಆಡಳಿತದ ಸ್ಥಾಪನೆಗೆ ಹಿನ್ನೆಲೆಯಾಗಿರುವುದು. ಬಲುಚಿಸ್ಥಾನದ ಪ್ರಜೆಗಳ ಬಯಕೆಗಳನ್ನು ಮತ್ತು ಸ್ಥಳೀಯ ವಿವಿಧ ಜಿರ್ಗಾ ಸಂಸ್ಥೆಗಳನ್ನು ಪ್ರತಿಕ್ಷಣದಲ್ಲೂ ಅನುಲಕ್ಷಿಸುವುದು ಈ ನಡುಗಾಲ ಪ್ರಭುತ್ವದ ಆಶಯವೆಂದು ಪ. ನೆಹರು ಅವರು ಹೇಳಿದ್ದಾರೆ.

# ೫ ನೆಯ ಪ್ರಕರಣ.



## ಮಂತ್ರಿಮಂಡಳಿಯ ನಿಯೋಗದ ಸೂಚನೆಗಳು

ಇಂದಿನ ನಡುಗಾಲ ಪ್ರಭುತ್ವವು ಮಂತ್ರಿಮಂಡಳಿಯ ನಿಯೋಗದ ಸೂಚನೆಗಳಿಗನುಸರಿಸಿ ರಚಿತವಾಗಿದೆ. ಈ ಸೂಚನೆಗಳನ್ನು ನಿಷ್ಕಪಟದಿಂದ ಮಂಡಿಸಿದ್ದೇವೆಂದು ಆ ನಿಯೋಗದ ನಾಯಕರಾದ ಲಾರ್ಡ್ ಪೆಥಿಕ್ ಲಾರೇನ್ಸ್ ಅವರು ಹೇಳಿರುವರು. ರಾಜ್ಯಾಧಿಕಾರವನ್ನು ಹಿಂದೀಯರಿಗೆ ಒಪ್ಪಿಸುವುದೇ ಈ ಯೋಜನೆಯ ಉದ್ದೇಶವೆಂದು ಅವರು ಸಾರಿರುವರು. ಈ ಸೂಚನೆಗಳ ಹಿನ್ನೆಲೆಯನ್ನು ತಿಳಿಯುವುದಕ್ಕೆ ನಿಯೋಗವು ಹಿಂದುಸ್ಥಾನಕ್ಕೆ ಬರುವದಕ್ಕಿಂತ ಮುಂಚೆ ಪಾರ್ಲಿಮೆಂಟಿನಲ್ಲಿ ಆದ ಚರ್ಚೆಗಳನ್ನು ಪರಿಶೀಲನ ಮಾಡುವುದು ಅವಶ್ಯವಾಗಿದೆ. ೧೯ ಫೆಬ್ರುವರಿ ೧೯೪೬ ನೆಯ ದಿನಾಂಕದಲ್ಲಿ ಭಾರತದ ಸಚಿವರಾದ ಲಾರ್ಡ ಪೆಥಿಕ್ ಲಾರೆನ್ಸ್‌ಅವರು ಪ್ರಭುಗಳ ಸಭೆಯಲ್ಲಿ ಕೆಳಗಿನಂತೆ ಘೋಷಣೆ ಮಾಡಿದರು.

"ಕೇಂದ್ರ ಮತ್ತು ಪ್ರಾಂತೀಯ ಆಯ್ಕೆಗಳು ಆದ ಒಡನೆಯೇ ಹಿದುಸ್ಥಾನದಲ್ಲಿ ಸಂಪೂರ್ಣ ಸ್ವರಾಜ್ಯ ಸ್ಥಾಪನೆಗಾಗಿ ಕೈಕೊಳ್ಳಬೇಕಾದ ಉಪಾಯಗಳ ಬಗ್ಗೆ ತಮ್ಮ ನೀತಿಯನ್ನು ವೈಸ್‌ರಾಯರು ೧೯೪೫ ನೆಯ ಸೆಪ್ಟೆಂಬರ ೧೯ ನೆಯ ದಿನಾಂಕದಲ್ಲಿ ಪ್ರತಿಪಾದಿಸಿದ್ದರು. ಬ್ರಿಟಿಷ್ ಪ್ರಭುತ್ವದವರೊಂದಿಗೆ ಚರ್ಚೆ ಮಾಡಿಕೊಂಡು ಹಿಂದುಸ್ಥಾನಕ್ಕೆ ಮರಳಿ ಅವರು ಈ ಘೋಷಣೆಯನ್ನು ಮಾಡಿದರೆಂದು ತಮಗೆ ನೆನಪುಕೊಟ್ಟರೆ ಸಾಕು. ಆ ಉಪಾಯಗಳು ಮುಖ್ಯವಾಗಿ ಮುಂದಿನಂತಿವೆ. ೧. ಹಿಂದುಸ್ಥಾನದ ಸಲುವಾಗಿ ರಚಿಸಬೇಕಾದ ಘಟನೆಯಬಗ್ಗೆ ಹೆಚ್ಚಿನ ಪ್ರಮಾಣದಲ್ಲಿ

ಅನುಮತಿಯನ್ನು ಪಡೆಯಲಿಕ್ಕೆ ಬ್ರಿಟಿಷ್ ಹಿಂದುಸ್ಥಾನದ ಆರಿಸಿದ ಪ್ರತಿನಿಧಿಗಳು ಮತ್ತು ದೇಶೀಯ ಸಂಸ್ಥಾನಗಳ ಪ್ರತಿನಿಧಿಗಳೊಡನೆ ವಿಚಾರ ವಿನಿಮಯ ಮಾಡುವುದು. ೨. ಘಟನಾಸಮತಿಯನ್ನು ಸ್ಥಾಪಿಸುವುದು. ೩. ಹಿಂದುಸ್ಥಾನದ ಮುಖ್ಯ ಪಂಗಡಗಳ ಸಹಾಯ ವನ್ನು ಪಡೆಯುವ ಮಂತ್ರಿಮಂಡಳಿಯನ್ನು ರಚಿಸುವುದು."

"ಹಿಂದುಸ್ಥಾನದ ಸಮಸ್ಯವು ಮಹತ್ವ ಪೂರ್ಣ ಉಳ್ಳದ್ದು. ಅದನ್ನು ಯಶಸ್ವಿಯಾಗಿ ಬಿಡಿಸಿದರೆ ಹಿಂದುಸ್ಥಾನ ಮತ್ತು ಬ್ರಿಟಿಷ್ ರಾಷ್ಟ್ರಕೂಟ ಇವುಗಳ ಕಲ್ಯಾಣ ಆಗುವದಲ್ಲದೆ ಜಾಗತಿಕ ಶಾಂತತೆಯ ಸ್ಥಾಪನೆ ಯಲ್ಲಿ ಸಹಾಯಕವಾಗುವುದು. ಈ ವಿಷಯವನ್ನು ಅನುಲಕ್ಷಿಸಿ ಅರಸರ ಮನ್ನಣೆಯನ್ನು ಪಡೆದು, ಈ ಕಾರ್ಯ ಸಾಧನೆಗಾಗಿ ವಿಶಿಷ್ಟ ಮಂತ್ರಿ ಮಂಡಳಿಯನ್ನು ಹಿಂದುಸ್ಥಾನಕೆ ಕಳುಹಿಸಬೇಕೆಂದು ಬ್ರಿಟಿಷ್ ಪ್ರಭು ತ್ವವು ನಿಶ್ಚಯಿಸಿರುವುದು. ಭಾರತದ ಸಚಿವರು ( ಲಾರ್ಡ ಪೆಥಿಕ್ ಲಾರೆನ್ಸರು ), ವಾಣಿಜ್ಯಸಂಘದ ಅಧ್ಯಕ್ಷರು. ( ಸರ್ ಸ್ಟ್ಯಾಫೋರ್ಡ್ ಕ್ರಿಪ್ಸರು), ನೌಕಾ ಸೇನಾಪತಿಗಳು (ಸರ್ ಎ. ವ್ಹಿ. ಅಲೆಕ್ಝಾಂಡರ್ ಅವರು ) ಈ ನಿಯೋಗದ ಸದಸ್ಯರು. ಅವರು ವೈಸ್‌ರಾಯರ ಸಹ ಕಾರವನ್ನು ಪಡೆದು ರಾಜಕೀಯ ಸಂಧಾನವನ್ನು ಮಾಡುವರು. ಇದೇ ಅಭಿಪ್ರಾಯದ ಹೇಳಿಕೆಯನ್ನು ಮಿ. ಏಟ್ಲಿ ಅವರು ಸಾಮಾನ್ಯರ ಸಭೆಯಲ್ಲಿ ಮಂಡಿಸಿದರು.

ಹಿಂದುಸ್ಥಾನದ ಭವಿತವ್ಯವನ್ನು ನಿರ್ಣಯಿಸುವ ಈ ಮಹತ್ವಪೂರ್ಣ ಪ್ರಶ್ನೆಯನ್ನು ಕುರಿತು ಸಾಮಾನ್ಯರ ಸಭೆಯಲ್ಲಿ ವಾದವಿವಾದ ನಡೆದಾಗ ಮಾರ್ಚ ತಿಂಗಳ ೧೫ ನೆಯ ದಿನಾಂಕದಲ್ಲಿ ಭಾರತದ ಬಗ್ಗೆ ಬ್ರಿಟಿಷ್ ಪ್ರಭುತ್ವದ ನೀತಿಯನ್ನು ಮಿ. ಏಟ್ಲಿ ಅವರು ಸ್ಪಷ್ಟಮಾಡಿದರು. "ಕ್ರೂರ

ಹಿಂಸೆಯನ್ನು ಸೋಲಿಸಲಿಕ್ಕೆ ಕಳೆದ ೨೫ ವರ್ಷಗಳಲ್ಲಿ ಹಿಂದುಸ್ಥಾನವು ಹೆಚ್ಚಿನ ಭಾಗವನ್ನು ವಹಿಸಿದೆಂಬ ಮಹತ್ವದ ಸಂಗತಿಯನ್ನು ನೀವು ನೆನಪಿನಲ್ಲಿಡತಕ್ಕದ್ದು. ೪೦ ಕೋಟಿ ಜನ ಸಂಖೆಯುಳ್ಳ ಭಾರತವು ಸ್ವಾತಂತ್ರ್ಯದ ರಕ್ಷಣೆಗಾಗಿ ಎರಡು ಸಲ ತನ್ನ ಪುತ್ರರನ್ನು ಆಹುತಿ ಕೊಟ್ಟಿದೆ. ಆದುದರಿಂದ ಇಂಥ ರಾಷ್ಟ್ರವು ತನ್ನ ಭವಿತವ್ಯವನ್ನು ನಿರ್ಣಯಿಸಲಿಕ್ಕೆ ಸ್ವಾತಂತ್ರ್ಯವನ್ನು ಬೇಡಿದರೆ ಆಶ್ಚರ್ಯವೇನು?" ಎಂದು ಅವರು ಹೇಳಿದರು.

"ಅಲ್ಪಸಂಖ್ಯಾಕರ ಹಿತದ ರಕ್ಷಣೆಯನ್ನು ಅಲಕ್ಷಿಸಬಾರದೆಂಬ ಪ್ರತಿಭಟನೆಯ ಪಕ್ಷದವರ ಆಕ್ಷೇಪಣಕ್ಕೆ ಏಟ್ಲಿ ಅವರು ಉತ್ತರ ಕೊಡುತ್ತ "ಅಲ್ಪಸಂಖ್ಯಾಕರ ಹಕ್ಕುಗಳ ರಕ್ಷಣೆಯಾಗಬೇಕೆಂದು ನಾವು ವ್ಯಾಕುಲರಾಗಿದ್ದೇವೆ" ಎಂದು ಹೇಳಿದರು. "ಅಲ್ಪಸಂಖ್ಯಾಕರು ನಿರ್ಭಯದಿಂದ ಬಾಳಬೇಕು. ಆದರೆ ಬಹುಸಂಖ್ಯಾಕರ ಅಭಿಮತದ ಮೇಲೆ ಅಲ್ಪಸಂಖ್ಯಾಕರ ನಿಷೇಧಾಧಿಕಾರ (ವ್ಹಿಟೋ) ನಡೆಸುವ ಹಕ್ಕು ಅವರಿಗೆ ನಾವು ಕೊಡಲಾರೆವು. ಹಿಂದೀಯರಿಗೆ ಸ್ವರಾಜ್ಯದ ಹೊಣೆಯನ್ನು ಒಪ್ಪಿಸುತ್ತೇವೆಂದು ಹೇಳುತ್ತ, ಅದೇ ಕಾಲಕ್ಕೆ ಅಲ್ಪಸಂಖ್ಯಾಕರನ್ನು ನಡಿಸಿಕೊಳ್ಳುವ ಕ್ರಮದ ಹೊಣೆ ಮತ್ತು ಈ ವಿಷಯದಲ್ಲಿ ಕೈಹಾಕುವ ಅಧಿಕಾರ ಇವುಗಳನ್ನು ಇಲ್ಲಿ ಉಳಿಸಿಕೊಳ್ಳುತ್ತೇವೆಂದು ನೀವು ಹೇಳುವುದು ಸಮಂಜಸವಾಗುವುದಿಲ್ಲ." ಎಂದು ಅವರು ಪ್ರತಿಪಾದಿಸಿದರು.

"ಯುದ್ಧದ ದುಷ್ಟ ಪರಿಣಾಮದಿಂದ ನಾಶಹೊಂದಿದ ಏಷಿಯಾ ಖಂಡದಲ್ಲಿ ಪ್ರಜಾಪ್ರಭುತ್ವದ ತತ್ವಗಳಿಗನುಸರಿಸಬೇಕೆಂದು ಪ್ರಯತ್ನ ಮಾಡುವುದರಲ್ಲಿ ಭಾರತವು ಒಂದೇ ದೇಶ. ಏಷಿಯಾಖಂಡಕ್ಕೆ ಅದು ಮಾರ್ಗದರ್ಶಕವಾಗುವುದೆಂದು ನನಗೆ ದೃಢವಾದ ನಂಬಿಕೆ. ಸ್ವಾತಂತ್ರ್ಯ

ಸಾಧನೆಗಾಗಿ ಘಟನಾಸಮಿತಿ ಎಂಬ ಒಂದು ಯಂತ್ರವನ್ನು ಹಿಂದುಸ್ಥಾನಕ್ಕೆ ರಚಿಸಿಕೊಳ್ಳಬೇಕಾಗಿದೆ. ಅಂತಹ ಘಟನಾ ಸಮಿತಿಯು ಹಿಂದುಸ್ಥಾನದಲ್ಲಿ ಸ್ಥಾಪಿತವಾಗಬೇಕೆಂದು ನಾವು ದೃಢನಿಶ್ಚಯ ಮಾಡಿರುವೆವು. ಈ ಬಗ್ಗೆ ಹಿಂದುಸ್ಥಾನದ ಮುಖಂಡರ ಹೆಚ್ಚಿನ ಸಹಾಯವನ್ನು ಮನಸ್ಸಿನಿಂದ ನಾವು ಕೋರುತ್ತೇವೆಂದು ಮಿ. ಏಟ್ಲಿ ಅವರು ಹೇಳಿದರು. ಮೇಲಿನ ವಿವೇಚನೆಯಿಂದ ಬ್ರಿಟಿಷ್ ಪ್ರಭುತ್ವದ ಸದುದ್ದೇಶವು ವ್ಯಕ್ತವಾಗುವುದು.

ಬ್ರಿಟಿಷ್ ಪ್ರಭುತ್ವದ ನಿರ್ಣಯಕ್ಕನುಸರಿಸಿ, ಲಾರ್ಡ ಪೆಥಿಕ್ ಲಾರೆನ್ಸ್, ಸರ್ ಸ್ಟ್ಯಾಫೊರ್ಡ್ ಕ್ರಿಪ್ಸ ಮತ್ತು ಮಿ. ಎ. ವ್ಹಿ. ಅಲೆಕ್ ಝಾಂಡರ್ ಈ ಮೂರುಜನ ಸದಸ್ಯರಿಂದೊಳಗೊಂಡ ಮಂತ್ರಿಮಂಡಳಿಯ ನಿಯೋಗವು ಹಿಂದುಸ್ಥಾನಕ್ಕೆ ಮಾರ್ಚ ತಿಂಗಳ ೨೪ ನೆಯ ದಿನಾಂಕದಲ್ಲಿ ಆಗಮಿಸಿತು. ಹಿಂದುಸ್ಥಾನದ ರಾಜಕೀಯ ಮುಖಂಡರೊಡನೆ ವಿಚಾರ ವಿನಿಮಯ ಮಾಡಿದಮೇಲೆ ಮೇ ತಿಂಗಳ ೧೬ ನೆಯ ದಿನಾಂಕದಲ್ಲಿ ಆ ನಿಯೋಗದ ಸದಸ್ಯರು ಮತ್ತು ವೈಸ್‌ರಾಯರು ಒಂದು ಸಂಯುಕ್ತ ಹೇಳಿಕೆಯನ್ನು ಹೊರಡಿಸಿದರು. ಅದರ ಸಾರಾಂಶ ಕೆಳಗಿನಂತಿದೆ:—

(೧) "ಕಳೆದ ಮಾರ್ಚತಿಂಗಳ ೧೫ ನೆಯ ದಿನಾಂಕದಲ್ಲಿ ಬ್ರಿಟಿಷ್ ಮಂತ್ರಿ ಮಂಡಳಿಯ ನಿಯೋಗವು ಹಿಂದುಸ್ಥಾನಕ್ಕೆ ಹೊರಡುವುದಕ್ಕಿಂತ ಮುಂಚಿತವಾಗಿ ಮುಖ್ಯ ಮಂತ್ರಿ ಕ್ಲೆಮೆಂಟ್ ಏಟ್ಲಿಯವರು ಈ ಮುಂದೆ ವಿವರಿಸಿದಂತೆ ಹೇಳಿದರು:– "ಹಿಂದುಸ್ಥಾನವು ಶಕ್ಯವಿದ್ದಮಟ್ಟಿಗೆ ಶೀಘ್ರವಾಗಿಯೂ ಸಂಪೂರ್ಣವಾಗಿಯೂ ಸ್ವಾತಂತ್ರ್ಯವನ್ನು ಪಡೆಯುವುದರಲ್ಲಿ ಹೆಚ್ಚಿನ ಸಹಾಯ ಮಾಡಬೇಕೆಂಬ ಉದ್ದೇಶದಿಂದ ನನ್ನ ಸಂಗಡಿಗರು ಹಿಂದುಸ್ಥಾನಕ್ಕೆ ತೆರಳುತ್ತಿರುವರು. ಇಂದಿನ ಆಡಳಿತೆಯ ಸ್ಥಾನದಲ್ಲಿ ಯಾವ ವಿಧವಾದ ಪ್ರಭುತ್ವವನ್ನು ಸ್ಥಾಪಿಸಬೇಕೆಂಬ ನಿರ್ಣಯ

ಹಿಂದುಸ್ಥಾನವೇ ಮಾಡಬೇಕು. ಆ ನಿರ್ಣಯವನ್ನು ಕೈಕೊಳ್ಳಲಿಕ್ಕೆ ಬೇಕಾಗುವ ಯಂತ್ರವನ್ನು ನಿರ್ಮಾಣ ಮಾಡುವುದರಲ್ಲಿ ಸಹಾಯ ಮಾಡುವುದೇ ನಮ್ಮ ಅಭಿಲಾಷೆ. ಹಿಂದುಸ್ಥಾನವು ಮತ್ತು ಅದರ ಜನತೆ ಬ್ರಿಟಿಷ್ ಸಾಮ್ರಾಜ್ಯದೊಳಗಿರಲಿಕ್ಕೆ ಒಪ್ಪುವರೆಂದು ನಾನು ಆಶಿಸುತ್ತೇನೆ. ಅವರಿಗೆ ಅದರಲ್ಲಿ ಹೆಚ್ಚಿನ ಸೌಕರ್ಯಗಳು ಲಭಿಸುವ್ರ ವೆಂದು ನನಗೆ ದೃಢವಾದ ನಂಬಿಕೆ. ಆದರೆ ಸಾಮ್ರಾಜ್ಯಾಂತರ್ಗತ ವಾಗಿರಬೇಕೆಂದು ಅದು ನಿರ್ಣಯ ತೆಗೆದುಕೊಂಡರೆ ಸ್ವತಂತ್ರ ಸಂಕಲ್ಪದ ಮೇರೆಗೆ ತೆಗೆದುಕೊಳ್ಳಬೇಕು. ಬ್ರಿಟಿಷ್ ಸಾಮ್ರಾಜ್ಯವು ಒತ್ತಾಯ ಮಾಡುವದಿಲ್ಲ.

ಇದು ಸ್ವತಂತ್ರ ಜನತೆಯ ಸ್ವತಂತ್ರವಾದ ಸಂಘ. ಇದಕ್ಕೆ ಬೇರೆ ಯಾಗಿ ಹಿಂದುಸ್ಥಾನವು ಕೇವಲ ಸ್ವತಂತ್ರವಾಗಿರಬೇಕೆಂದು ಭಾವಿ ಸಿದರೆ ಹಾಗೂ ಸ್ವತಂತ್ರವಾಗಿರುವ ಬಾಧ್ಯತೆ ಅದಕ್ಕೆ ಇರುವುದೆಂದು ನಮ್ಮ ಅಭಿಪ್ರಾಯ. ಇಂತಹ ನಡುಗಾಲವು ಸುಗಮವಾಗುವಂತೆ ಮಾಡುವುದು ನಮ್ಮ ಕೆಲಸ."

(೨) ಮೇಲಿನ ಐತಿಹಾಸಿಕ ಶಬ್ದಗಳಲ್ಲಿ ಅಪ್ಪಣೆ ಪಡೆದ ನಾವೂ —ಮಂತ್ರಿಮಂಡಳಿಯ ನಿಯೋಗದ ಸದಸ್ಯರು ಮತ್ತು ವೈಸ್‌ರಾಯರು— ಹಿಂದುಸ್ಥಾನದ ಐಕ್ಯ ಅಥವಾ ವಿಭಾಗದ ಮುಖ್ಯ ಸಂಗತಿಯ ಬಗ್ಗೆ ಒಪ್ಪಂದವನ್ನು ಮಾಡಿಕೊಳ್ಳಲಿಕ್ಕೆ ಎರಡು ಪ್ರಮುಖ ರಾಜಕೀಯ ಪಂಗಡಗಳಿಗೆ ಸಹಾಯಮಾಡುವುದರಲ್ಲಿ ಹೆಚ್ಚಿನ ಪ್ರಯತ್ನ ಪಟ್ಟೆವು. ಆ ಎರಡೂ ಪಂಗಡದವರು ಒಂದೆಡೆ ಸೇರಿ ವಿಚಾರಮಾಡಿದರೂ ಒಪ್ಪಂದ ಸಾಧ್ಯವಾಗಲಿಲ್ಲ. ಆದುದರಿಂದ ಹೊಸ ವಿಧಾನವನ್ನು ರಚಿಸುವುದರಲ್ಲಿ ನಮಗೆ ಯೋಗ್ಯವೆಂದು ತಿಳಿದಿರುವ ಯೋಜನೆಯನ್ನು ಮುಂದಿಡುತ್ತೇವೆ. ಸಂಯುಕ್ತ ಸಾಮ್ರಾಜ್ಯದ ಸಾರ್ವಭೌಮರ ಪ್ರಭುತ್ವದ ಸಂಪೂರ್ಣ ಸಮ್ಮತಿಯನ್ನು ಪಡೆದು ಈ ಹೇಳಿಕೆಯನ್ನು ಕೊಡುತ್ತೇವೆ.

(೩) ಹಿಂದೀಯರು ಮುಂದಿನ ವಿಧಾನವನ್ನು ತಾವೇ ನಿರ್ಣಯ ಮಾಡಿಕೊಳ್ಳಬೇಕು. ಮತ್ತು ಹೊಸವಿಧಾನವು ಆಚರಣೆಯಲ್ಲಿ ಬರುವ ವರೆಗೆ ಬ್ರಿಟಿಷ್ ಹಿಂದುಸ್ಥಾನದ ಆಡಳಿತವನ್ನು ನಡೆಸಬೇಕಾದುದರಿಂದ ವಿಳಂಬ ಮಾಡದೆ ನಡುಗಾಲ ಪ್ರಭುತ್ವವನ್ನು ಸ್ಥಾಪಿಸಬೇಕೆಂದು ನಾವು ನಿಶ್ಚಯ ಮಾಡಿಕೊಂಡಿದ್ದೆವೆ. ಜನತೆಯ ಸಣ್ಣದೊಡ್ಡ ವಿಭಾಗಗಳಿಗೆ ನಾವು ನ್ಯಾಯಮಾಡಲಿಕ್ಕೆ ಯತ್ನಪಟ್ಟಿರುವೆವು. ಹಿಂದುಸ್ಥಾನದ ರಾಜ್ಯ ವೆವಸ್ಥೆಯು ಸುಗಮವಾಗಿ ನಡೆಯಲಿಕ್ಕೆ ಮತ್ತು ಅದನ್ನು ರಕ್ಷಿಸಲಿಕ್ಕೆ ಗಟ್ಟಿಯಾದ ತಳಹದಿಯನ್ನು ಹಾಕಬೇಕು ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಸ್ವಾತಂತ್ರ್ಯದಲ್ಲಿ ಪ್ರಗತಿ ಮಾಡಲು ಅದಕ್ಕೆ ಒಳ್ಳೆಯ ಸಂಧಿಯನ್ನು ಕಲ್ಪಿಸಿ ಕೊಡುವ ಸಮಸ್ಯವನ್ನು ಬಿಡಿಸುವ ಬಗ್ಗೆ ಸೂಚನೆ ಗಳನ್ನು ಕೊಡುವೆವು.

(೪) ಈ ಹೇಳಿಕೆಯಲ್ಲಿ ದೊಡ್ಡ ಪ್ರಮಾಣದಿಂದ ಬಂದ ಸಾಕ್ಷಿಗಳ ವಿಮರ್ಶೆ ಮಾಡುವುದು ನಮ್ಮ ಉದ್ದೇಶವಿಲ್ಲ. ಆದರೆ ಮುಸ್ಲಿಂ ಲೀಗಿನ ಅನುಯಾಯಿಗಳನ್ನು ಬಿಟ್ಟರೆ ಹಿಂದುಸ್ಥಾನದ ಐಕ್ಯವನ್ನು ಕಾಪಾಡಿಕೊಳ್ಳಬೇಕೆಂದು ಸಾರ್ವತ್ರಿಕ ಅಪೇಕ್ಷೆ ಕಂಡುಬಂತೆಂದು ಹೇಳುವುದು ಯೋಗ್ಯ.

(೫) ಆದರೆ ಈ ವಿಚಾರವು ಹಿಂದುಸ್ಥಾನದ ವಿಭಾಗದ ಶಕ್ಯತೆಯ ಬಗ್ಗೆ ನ್ಯಾಯಬುದ್ಧಿಯಿಂದ ನಮಗೆ ಸೂಕ್ಷ್ಮವಾಗಿ ಪರಿಷ್ಕರಣ ಮಾಡಲಿಕ್ಕೆ ತಡೆಯಲಿಲ್ಲ. ಏಕೆಂದರೆ ಹಿಂದುಗಳ ಸಂಖ್ಯಾ ಬಾಹುಳ್ಯದ ಆಡಳಿತಕ್ಕೆ ಒಳಪಡುತ್ತೇವೆಂಬ ಮುಹಮ್ಮದೀಯರ ನಿಜವಾದ ಮತ್ತು ತೀಕ್ಷ್ಣವಾದ ವ್ಯಾಕುಲತೆಯಿಂದ ನಮ್ಮ ಮನಸ್ಸಿನಮೇಲೆ ಬಹಳ ಪರಿಣಾಮವಾಗಿದೆ. ಆ ವ್ಯಾಕುಲತೆಯು ಬಹಳ ವ್ಯಾಪಿಸಿರುವುದು.

ಅದು ಕೇವಲ ಕಾಗದ ಭದ್ರತೆಗಳಿಂದ ನಿವಾರಣೆಯಾಗಲಾರದು. ಮುಸಲ್ಮಾನರ ಸಾಂಸ್ಕೃತಿಕ, ಧಾರ್ಮಿಕ, ಆರ್ಥಿಕ ಮತ್ತು ಇನ್ನಿತರ ಹಿತಗಳಬಗ್ಗೆ ಅಗತ್ಯವಾದ ವಿಷಯಗಳಲ್ಲಿ ಅವರಿಗೆ ಅಧಿಕಾರ ಪ್ರಾಪ್ತ ವಾಗುವುದೆಂದು ಆಶ್ವಾಸನ ಕೊಡುವುದರಿಂದಲೇ ಹಿಂದುಸ್ಥಾನದಲ್ಲಿ ಆಂತರಿಕ ಶಾಂತತೆ ಸ್ಥಾಪನೆಯಾಗುವುದು.

(೬) ಮುಸ್ಲಿಂ ಲೀಗ್ ಬೇಡುತ್ತಿರುವ ಪ್ರತ್ಯೇಕವಾದ ಸ್ವತಂತ್ರ ಆಧಿಪತ್ಯವುಳ್ಳ ಪಾಕಿಸ್ಥಾನದ ಪ್ರಶ್ನೆಯನ್ನು ಮೊಟ್ಟಮೊದಲು ಪರಿಷ್ಕಾರ ಮಾಡುವೆವು. ಇಂತಹ ಪಾಕಿಸ್ಥಾನವು ಎರಡುಪ್ರದೇಶಗಳಲ್ಲಿ ಆಗಬಹುದು, ಪಂಜಾಬ – ಸಿಂಧ, ಗಡಿನಾಡು ಮತ್ತು ಬ್ರಿಟಿಷ್ ಬಲುಚಿಸ್ತಾನ್ ಇವು ಗಳಿಂದೊಡಗೂಡಿದ ಉತ್ತರಪಶ್ಚಿಮದಲ್ಲಿ, ಮತ್ತೊಂದು ಬಂಗಾಳ, ಆಸಾಮು ಇವುಗಳಿಂದೊಡಗೂಡಿದ ಉತ್ತರ–ಪೂರ್ವ ಪ್ರದೇಶಗಳಲ್ಲಿ. ಪಾಕಿಸ್ತಾನದ ತತ್ವಗಳನ್ನು ಮೊದಲು ಒಪ್ಪಬೇಕೆಂದು ಲೀಗಿನ ಆಗ್ರಹ ಇತ್ತು. ಪ್ರಾಂತಗಳ ಸೀಮೆಗಳಲ್ಲಿ ಹೆಚ್ಚುಕಡಿಮೆ ಮಾಡುವುದನ್ನು ಮುಂದೆ ವಿಚಾರಮಾಡಬಹುದೆಂದು ಅದರ ಅಭಿಮತವಾಗಿತ್ತು. ಮುಸಲ್ಮಾನರಿಗೆ ತಮ್ಮ ಆಶೆ ಆಕಾಂಕ್ಷೆಗಳ ಮೇರೆಗೆ ರಾಜ್ಯಸೂತ್ರಗಳನ್ನು ನಡೆಸುವ ಹಕ್ಕು ಇರುವುದೆಂಬುದು ಮೊದಲನೆಯ ವಿಷಯ. ಆಡಳಿತದ ದೃಷ್ಟಿಯಿಂದಲೂ ಮತ್ತು ಆರ್ಥಿಕ ದೃಷ್ಟಿಯಿಂದಲೂ ಪಾಕಿಸ್ತಾನವು ನಡೆಸಲಿಕ್ಕೆ ಯೋಗ್ಯ ವಾಗಿರಬೇಕಾದರೆ ಮುಸ್ಲಿಂ ಅಲ್ಪಸಂಖ್ಯಾಕರ ಪ್ರಾಂತಗಳಲ್ಲಿ ಸತ್ವವುಳ್ಳ ಕೆಲವು ಪ್ರಾಂತಗಳನ್ನು ಸೇರಿಸಬೇಕೆಂಬುದು ಎರಡನೆಯ ವಿಷಯ. ಇವುಗಳ ಆಧಾರಗಳಮೇಲೆ ಮುಸಲ್ಮಾನರು ಪಾಕಿಸ್ತಾನ ಬೇಕೆಂದು ವಾದಿಸುತ್ತಿರುವರು.

ಆರು ಪ್ರಾಂತಗಳಿಂಯೊಡಗೂಡಿದ ಪಾಕಿಸ್ತಾನದಲ್ಲಿರುವ ಮುಸ್ಲಿಮೇತರರ ಜನಸಂಖ್ಯೆಯ ಪ್ರಮಾಣ ಬಹಳದೊಡ್ಡದಾಗಿರುವುದೆಂದು ಕೆಳಗಿನ ವಿವರದಿಂದ ತಿಳಿಯ ಬರುವುದು.

| ಉತ್ತರ ಪಶ್ಚಿಮ ಪ್ರದೇಶ:– | ಮುಸ್ಲಿಮರು. | ಮುಸ್ಲಿಮೇತರರು. |
|---|---|---|
| (೧) ಪಂಜಾಬ. | ೧೬,೨೧೭.೨೪೨ | ೧೨.೨೦೧,೫೭೭ |
| (೨) ಗಡಿನಾಡಿನ ಪ್ರಾಂತ. | ೨.೭೮೮.೭೯೭ | ೨೪೯,೨೭೦ |
| (೩) ಸಿಂಧ | ೩,೨೦೮.೩೨೫ | ೧,೩೨೬,೬೮೩ |
| (೪) ಬ್ರಿಟಿಷ್‌ಬಲೂಚಿಸ್ಥಾನ. | ೪೩೮,೯೩೦ | ೬೨,೭೦೧ |
| ಒಟ್ಟು :— | ೨೨,೬೫೩,೨೯೪ | ೧೩,೮೪೦,೨೩೧ |
| ನೂರಕ್ಕೆ – | ೬೨.೦೭ | ೩೭.೯೩ % |
| ಉತ್ತರ ಪೂರ್ವ ಪ್ರದೇಶ:– | | |
| (೫) ಬಂಗಾಳ. | ೩೩,೦೦೫,೪೩೪ | ೨೭,೩೦೧,೦೯೧ |
| (೬) ಆಸಾಮು. | ೩,೪೪೨,೪೭೯ | ೬,೭೬೨,೨೫೪ |
| ಒಟ್ಟು :— | ೩೬,೪೪೭,೯೧೩ | ೩೪,೦೬೩,೩೪೫ |
| ಪ್ರತಿಶತಸಂಖ್ಯೆ. | ೫೧.೬೯% | ೪೮.೩೧% |

ಸುಮಾರು ೧೯ ಕೋಟಿ ಜನವಸತಿಯುಳ್ಳ ಇನ್ನಿತರ ಪ್ರಾಂತಗಳಲ್ಲಿ ೨ ಕೋಟಿ ಮುಸ್ಲಿಮರು ಅಲ್ಪಸಂಖ್ಯಾಕರಾಗಿ ಹಬ್ಬಿರುವರು.

ಮುಸಲ್ಮಾನರ ಬೇಡಿಕೆಯ ಮೇರೆಗೆ ಪ್ರತ್ಯೇಕವಾದ ಅಧಿಪತ್ಯವುಳ್ಳ ಪಾಕಿಸ್ತಾನವು ಜಾತೀಯ ಅಲ್ಪಸಂಖ್ಯಾಕರ ಪ್ರಶ್ನೆಯನ್ನು ಬಿಡಿಸಲಾರದೆಂದು ಮೇಲಿನ ಸಂಖ್ಯೆಗಳಿಂದ ಗೊತ್ತಾಗಬಹುದು. ಪಂಜಾಬ, ಬಂಗಾಳ, ಆಸಾಮು ಪ್ರಾಂತಗಳಲ್ಲಿ ಜನವಸತಿಯು

ಬಹಳವಮಟ್ಟಿಗೆ ಮುಸ್ಲಿಮೇತರರದೇ ಆಗಿರುವುದು. ಈ ಪ್ರಾಂತಗಳನ್ನು ಪಾಕಿಸ್ತಾನದಲ್ಲಿ ಸೇರಿಸುವುದು ನಮಗೆ ನ್ಯಾಯವೆಂದು ತೋರುವುದಿಲ್ಲ. ಪಾಕಿಸ್ತಾನದ ಸಾಧನೆಗಾಗಿ ಹೇಳುವ ಪ್ರತಿಯೊಂದು ಪ್ರಮಾಣವು ಪಾಕಿಸ್ತಾನದಿಂದ ಮುಸ್ಲಿಮೇತರರನ್ನು ಬೇರ್ಪಡಿಸಬೇಕೆಂಬ ಬೇಡಿಕೆಯನ್ನು ಸಮರ್ಥನೆ ಮಾಡುವುದೆಂದು ನಮ್ಮ ಅಭಿಮತವಾಗಿದೆ. ಇದರಿಂದ ಸಿಖ್ಖರ ಮೇಲೆ ಬಹಳ ಪರಿಣಾಮವಾಗುವುದು.

(೬) ಬಹುಸಂಖ್ಯಾಕರಾದ ಮುಸ್ಲಿಂ ಜನವಸತಿಯುಳ್ಳ ಪ್ರದೇಶದಲ್ಲಿ ಸಣ್ಣ ಪಾಕಿಸ್ತಾನದ ಶಕ್ಯತೆಯ ಬಗ್ಗೆ ನಾವು ವಿಚಾರ ಮಾಡಿದೆವು. ಆದರೆ ಇದು ಮುಸ್ಲಿಮರಿಗೆ ಅನುಕೂಲವಾಗುವದಿಲ್ಲ. ಏಕೆಂದರೆ ಹಾಗೆ ಮಾಡುವುದರಿಂದ (ಅ) ಪಂಜಾಬದೊಳಗಿನ ಅಂಬಾಲಾ, ಜಾಲಂಧರ ವಿಭಾಗಗಳು. (ಬ) ಸಿಲ್ಹಟ್ ಡಿಸ್ಟ್ರಿಕ್ಟ ಬಿಟ್ಟು ಸಂಪೂರ್ಣ ಆಸಾಮು ಪ್ರಾಂತವೂ. (ಕ) ಬಂಗಾಳದ ಪಶ್ಚಿಮದ ಬಹುಭಾಗವೂ ನೂರಕ್ಕೆ ೨೩.೬ ಮುಸ್ಲಿಂ ಜನವಸತಿಯುಳ್ಳ ಕಲ್ಕತ್ತಾ ಪಟ್ಟಣವು ಪಾಕಿಸ್ತಾನ ಪ್ರದೇಶದಲ್ಲಿ ಸೇರದೆ ಮುಸ್ಲಿಮರ ಕೈ ಬಿಡುವುವು. ಇವಲ್ಲದೇ ಬಂಗಾಳ ಮತ್ತು ಪಂಜಾಬ ಪ್ರಾಂತಗಳಿಗೆ ಸಾಮಾನ್ಯವಾದ ಭಾಷೆಗಳಿವೆ.

ಪಂಜಾಬವನ್ನು ವಿಭಾಗ ಮಾಡಿದರೆ ಎರಡು ಭಾಗಗಳಲ್ಲಿಯೂ ಸಿಖ್ಖರು ಬಹುಸಂಖ್ಯಾಕರಾಗಿ ವಿಂಗಡಿಸಲ್ಪಡುವರು. ಆದುದರಿಂದ ದೊಡ್ಡ ಪ್ರಮಾಣದಲ್ಲಿಯೇ ಆಗಲಿ ಅಥವಾ ಸಣ್ಣ ಪ್ರಮಾಣದಲ್ಲಿಯೇ ಆಗಲಿ ಪಾಕಿಸ್ತಾನದ ಸ್ಥಾಪನೆಯಿಂದ ಜಾತಿಯ ಸಮಸ್ಯೆಯು ಬಿಡಿಸಲಿಕ್ಕೆ ಸಾಧ್ಯವಿಲ್ಲೆಂದು ಖಂಡಿತವಾಗಿ ಹೇಳಬಹುದು.

(೮) ಮೇಲೆ ಹೇಳಿದ ಸಬಲವಾದ ಕಾರಣಗಳಲ್ಲದೆ ಆಡಳಿತಕ್ಕೆ ಸಂಬಂಧಪಟ್ಟ, ಆರ್ಥಿಕ ಮತ್ತು ಸೈನಿಕ ಮಹತ್ವದ ವಿಚಾರಾಂಶ ಗಳಿರುವವು. ಸಂಯುಕ್ತ ಹಿಂದುಸ್ಥಾನದ ತಳಹದಿಯಮೇಲೆ ಪರದೇಶದ ನಿರ್ಯಾತ, ಅಂಚೆ, ತಂತಿ ಇವುಗಳ ವ್ಯವಸ್ಥೆಯನ್ನು ಮಾಡಲಾಗಿದೆ. ಇವುಗಳನ್ನು ಒಡೆಯುವದರಿಂದ ಎರಡು ಭಾಗಗಳಿಗೆ ಕೇಡಾಗುವುದು. ಹಿಂದುಸ್ಥಾನದ ಸಂಯುಕ್ತ ರಕ್ಷಣೆಗೆ ಸಬಲವಾದ ಆಧಾರಗಳಿರುವವು. ಈಗ ಹಿಂದುಸ್ಥಾನದ ಸೈನ್ಯವು ಅಖಂಡ ಹಿಂದುಸ್ಥಾನದ ರಕ್ಷಣೆಗಾಗಿ ಕಟ್ಟಲ್ಪಟ್ಟದೆ. ಅದರ ವಿಭಾಗದಿಂದ ಸೈನ್ಯವು ಬಲಾಢ್ಯವಾಗಲಾರದು. ಹಡಗುಪಡೆ ಮತ್ತು ವಿಮಾನದಳಗಳು ದುರ್ಬಲ ವಾಗುವವು. ಸೂಚಿ ಸಲ್ಪಟ್ಟ ಪಾಕಿಸ್ತಾನದ ಎರಡು ಭಾಗಗಳು ಭೇದ್ಯ ವಾದ ಗಡಿನಾಡುಗ ಳಾಗಿರುವ ಕಾರಣ, ಪಾಕಿಸ್ತಾನದ ಈ ಅಲ್ಪ ಪ್ರದೇಶಗಳು ಪರಕೀಯ ಆಕ್ರಮಣದಿಂದ ದೇಶದ ರಕ್ಷಣೆ ಮಾಡಲಿಕ್ಕೆ ಅಸಮರ್ಥವಾಗಿರುವವು.

(೯) ಇನ್ನೊಂದು ಮಹತ್ವವಾದ ವಿಚಾರ ದೇಶೀಯ ಸಂಸ್ಥಾನ ಗಳಬಗ್ಗೆ. ಅವು ವಿಂಗಡಿಸಿದ ಹಿಂದುಸ್ಥಾನದ ಜೊತೆಗೆ ತಮ್ಮ ಸಂಬಂಧ ಗಳನ್ನು ಬೆಳೆಯಿಸಿಕೊಳ್ಳಲಿಕ್ಕೆ ಸಮರ್ಥವಾಗಲಾರವು.

(೧೦) ಎಲ್ಲಕ್ಕೂ ಮೀರಿ ಒಂದು ಭೌಗೋಲಿಕ ಅಡಚಣೆ ಇರು ವುದು. ಸೂಚಿಸಲ್ಪಟ್ಟ ಪಾಕಿಸ್ತಾನದ ಎರಡು ಭಾಗಗಳು ಸುಮಾರು ಏಳು ನೂರು ಮೈಲಗಳ ಅಂತರದಮೇಲಿರುವುವು. ಯುದ್ಧ ಮತ್ತು ಶಾಂತತೆಯ ಕಾಲಗಳಲ್ಲಿ ಈ ಎರಡು ಭಾಗಗಳಲ್ಲಿ ಅವಶ್ಯವಾದ ಅರಿಕೆ, ವ್ಯವಹಾರಗಳು ಹಿಂದುಸ್ಥಾನವು ಹಾದಿ ಕೊಟ್ಟಪಕ್ಷದಲ್ಲಿಯೇ ಸಾಧ್ಯವಾಗುವುವು.

(೧೧) ಆದ್ದರಿಂದ ಇಂದು ಬ್ರಿಟಿಷರ ಕೈಯ್ಯಲ್ಲಿದ್ದ ರಾಜ್ಯಾಧಿಕಾರವನ್ನು ಪ್ರತ್ಯೇಕವಾಗಿರುವ, ಆಧಿಪತ್ಯವುಳ್ಳ ಎರಡು ರಾಜ್ಯಗಳಿಗೆ ಒಪ್ಪಿಸಬೇಕೆಂದು ಬ್ರಿಟಿಷ್ ಪ್ರಭುತ್ವಕ್ಕೆ ನಾವು ಸಲಹೆ ಕೊಡಲಿಕ್ಕೆ ಅಸಮರ್ಥರಾಗಿರುವೆವು.

(೧೨) ಹಿಂದೂ ಜನರ ಸಂಖ್ಯಾ ಬಾಹುಳ್ಯವುಳ್ಳ ಏಕತಂತ್ರೀಯ ಹಿಂದುಸ್ಥಾನದಲ್ಲಿ ಮುಸಲ್ಮಾನರ ಸಂಸ್ಕೃತಿ, ರಾಜಕೀಯ ಜೀವನಗಳು ಮುಳುಗಿ ಹೋಗುವವೆಂಬ ಅಂಜಿಕೆ ಮುಸಲ್ಮಾನರಿಗೆ ಇರುವುದು ಸಹಜ.

ಮೇಲಿನ ನಿರ್ಣಯದಿಂದ ನಾವು ಅವರ ಹೆದರಿಕೆಗಳನ್ನು ಕಣ್ಮರೆ ಮಾಡಲಾರೆವು. ಮುಸಲ್ಮಾನರ ಬೇಡಿಕೆಗಳನ್ನು ಪೂರ್ಣಮಾಡಲಿಕ್ಕೆ ಕಾಂಗ್ರೆಸ್ಸು ಒಂದು ಯೋಜನೆ ಯನ್ನು ಸೂಚಿಸಿರುವುದು. ಈ ಯೋಜನೆಯಮೇರೆಗೆ ಕೇಂದ್ರದ ವಿಷಯಗಳಾದ ಪರದೇಶೀಯ ವ್ಯವಹಾರಗಳು, ದೇಶದ ರಕ್ಷಣೆ ಮತ್ತು ಅರಿಕೆಯ ವಿಭಾಗ ಇವುಗಳನ್ನು ಬಿಟ್ಟು ಪ್ರಾಂತಗಳಿಗೆ ಆಡಳಿತದಲ್ಲಿ ಸಂಪೂರ್ಣ ಸ್ವಾಯತ್ತತೆ ಪ್ರಾಪ್ತವಾಗುವುದು. ಮೇಲೆ ಹೇಳಿದ ಬಲಾತ್ಕಾರದ ವಿಷಯಗಳಲ್ಲದೆ ಆರ್ಥಿಕ ಮತ್ತು ಆಡಳಿತದ ಯೋಜನೆಗಳ ಬಗ್ಗೆ ಐಚ್ಛಿಕ ವಿಷಯಗಳನ್ನು ಬೇಕಾದರೆ ಯಾವುದೊಂದು ಪ್ರಾಂತವು ಕೇಂದ್ರಕ್ಕೆ ಒಪ್ಪಿಸಬಹುದು.

(೧೩) ಮೇಲಿನ ಯೋಜನೆಯಿಂದ ಅನೇಕ ವೈಧಾನಿಕ ಅಡಚಣೆಗಳು ಹುಟ್ಟುವವೆಂದು ನಮ್ಮ ಅಭಿಪ್ರಾಯ.

ದೇಶೀಯ ಸಂಸ್ಥಾನಗಳು.

(೧೪) ಬ್ರಿಟಿಷ್ ಹಿಂದುಸ್ಥಾನ ಮತ್ತು ದೇಶೀಯ ಸಂಸ್ಥಾನಗಳಲ್ಲಿ ಮುಂದೆ ಯಾವ ಸಂಬಂಧವಿರಬೇಕೆಂಬ ವಿಷಯ ಗಮನಾರ್ಹವಾಗಿದೆ.

ಬ್ರಿಟಿಷ್‌ಸಾಮ್ರಾಜ್ಯದೊಳಗಿದ್ದೇ ಆಗಲೀ ಅಥವಾ ಅದರಹೊರಗಿದ್ದೇ ಆಗಲೀ ಹಿಂದುಸ್ಥಾನವು ಸ್ವಾತಂತ್ರ್ಯವನ್ನು ಪಡೆದಮೇಲೆ ದೇಶೀಯ ಸಂಸ್ಥಾನ ಗಳ ಮತ್ತು ಬ್ರಿಟಿಷ್ ಮಕುಟ ಇವುಗಳಲ್ಲಿದ್ದ ಸಂಬಂಧವು ಮುಂದೆ ಸಾಧ್ಯವಾಗಲಾರದು. ಆಮೇಲೆ ಬ್ರಿಟಿಷ್ ಮಕುಟವು ಮಹಾಧಿಪತ್ಯ ವನ್ನು ತನ್ನ ಕೈಯ್ಯಲ್ಲಿಯೂ ಇಟ್ಟುಕೊಳ್ಳಲಾರದು, ಅಥವಾ ಹಿಂದು ಸ್ಥಾನದ ಹೊಸ ಪ್ರಭುತ್ವಕ್ಕೂ ಒಪ್ಪಿಸಲಾರದು. ದೇಶೀ ಸಂಸ್ಥಾನಗಳ ಪರವಾಗಿ ಭೇಟಿಯಾದ ಜನರಿಗೆ ಈ ಸಂಗತಿ ಮನವರಿಕೆಯಾಗಿದೆ. ಅದೇ ಕಾಲಕ್ಕೆ ಹಿಂದುಸ್ಥಾನದಲ್ಲಿ ಆಗುತ್ತಿರುವ ರಾಜಕೀಯ ಬೆಳವ ಣಿಗೆಯಲ್ಲಿ ಸಹಕಾರ ಮಾಡುತ್ತೇವೆಂದು ಅವರು ಆಶ್ವಾಸನ ಕೊಟ್ಟಿ ರುವರು. ಅವರ ಸಹಕಾರದ ನಿಶ್ಚಿತ ಸ್ವರೂಪವನ್ನು ವಿಧಾನ ರಚ ನೆಯ ಕಾಲಕ್ಕೆ ಒಪ್ಪಂದ ವಿಚಾರಣಾ ಸಮಿತಿಯ ಮೂಲಕ ನಿರ್ಣಯಿ ಸಬಹುದು. ಎಲ್ಲ ಸಂಸ್ಥಾನಗಳ ಸಹಕಾರದ ಸ್ವರೂಪ ಒಂದೇ ಮಾದ ರಿಯದು ಆಗಲಾರದೆಂಬ ಮಾತು ತಿಳಿಯುತಕ್ಕದ್ದು.

(೧೫) ಆದುದರಿಂದ ಈಗ ನಾವು, ಎಲ್ಲ ಪಂಗಡಗಳ ಬೇಡಿಕೆಗಳ ಸಾರಾಂಶಕ್ಕೆ ನ್ಯಾಯಪೂರ್ಣವಾಗುವಂತೆಯೂ, ಅಖಿಲ ಭಾರತಕ್ಕೆ ಸ್ಥೈರ್ಯ ಉಳ್ಳ ಮತ್ತು ಆಚರಿಸಲಿಕ್ಕೆ ಯೋಗ್ಯವಾದ ಘಟನೆಯನ್ನು ರಚಿಸುವುದು ಸಾಧ್ಯವಾಗುವಂತೆಯೂ, ಯೋಜನೆಯನ್ನು ಸೂಚಿಸು ತ್ತೇವೆ. ಆ ಪ್ರಕಾರ ನಾವು ಕೆಳಗೆ ಕಾಣಿಸಿದ ತಳಹದಿಯ ಮೇಲೆ ವಿಧಾನವು ರಚಿತವಾಗಬೇಕೆಂದು ಸಲಹೆ ಕೊಡುತ್ತೇವೆ. ೧. ಬ್ರಿಟಿಷ್ ಹಿಂದುಸ್ಥಾನ ಮತ್ತು ದೇಶೀಯ ಸಂಸ್ಥಾನಗಳಿಂದೊಡಗೂಡಿದ ಒಂದು ಸಂಘವಿರಬೇಕು. ಆ ಸಂಘವು ಕೆಳಗಿನ ವಿಷಯಗಳ ಬಗ್ಗೆ ವ್ಯವಹಾರ ನಡೆಯಿಸಬೇಕು. ಪರರಾಷ್ಟ್ರೀಯ ವ್ಯವಹಾರಗಳು, ಹಿಂದುಸ್ಥಾನದ ರಕ್ಷಣೆ,

ಅರಿಕೆಖಾತೆ, ಇದಲ್ಲದೆ ಮೇಲಿನ ಕೆಲಸ ನಡೆಯಿಸಲಿಕ್ಕೆ, ಹಣ ಸಂಚಯ ಮಾಡಲಿಕ್ಕೆ ಅಧಿಕಾರ ಅದಕ್ಕೆ ಪ್ರಾಪ್ತವಾಗಬೇಕು. ೨. ಬ್ರಿಟಿಷ್ ಹಿಂದುಸ್ಥಾನ ಮತ್ತು ದೇಶೀಯ ಸಂಸ್ಥಾನಗಳ ಪ್ರತಿನಿಧಿಗಳಿಂದ ಕೂಡಿದ ಕಾರ್ಯಸಭೆ ಮತ್ತು ಶಾಸನಸಭೆಗಳು ಆ ಸಂಘಕ್ಕೆ ಇರಬೇಕು. ಶಾಸನಸಭೆಯಲ್ಲಿ ಯಾವುದೊಂದು ಜಾತಿಯ ಸಮಸ್ಯೆ ಹುಟ್ಟಿದರೆ ಒಟ್ಟಿಗೆ ಬಂದ ಎಲ್ಲ ಸದಸ್ಯರ ಬಾಹುಳ್ಯವು, ಪ್ರತಿಯೊಂದು ಜಾತಿಯ ಪ್ರತಿನಿಧಿಗಳ ಮತಬಾಹುಳ್ಯವೂ ಹಾಗು ಸಭೆಗೆ ಬಂದ ಎಲ್ಲ ಸದಸ್ಯರ ಬಾಹುಳ್ಯದಿಂದ ಆ ವಿಷಯವನ್ನು ನಿರ್ಣಯಿಸಬೇಕು. ೩. ಸಂಘದ ವಿಷಯಗಳನ್ನು ಬಿಟ್ಟು ಎಲ್ಲ ವಿಷಯಗಳು ಮತ್ತು ಉಳಿದ ವಿಷಯ ಗಳ ಅಧಿಕಾರ ಪ್ರಾಂತಗಳಿಗೆ ಇರಬೇಕು. ೪. ಒಪ್ಪಿಸಲ್ಪಟ್ಟ ಅಧಿ ಕಾರಗಳನ್ನು ಬಿಟ್ಟು ಉಳಿದ ವಿಷಯಗಳು ಹಾಗು ಅಧಿಕಾರಗಳು ಸಂಸ್ಥಾನಗಳಿಗೆ ಪ್ರಾಪ್ತವಾಗಬೇಕು. ೫. ಕಾರ್ಯಸಭೆ ಮತ್ತು ಶಾಸನಸಭೆಗಳಿಂದ ಯುಕ್ತವಾದ ಪ್ರಾಂತಗಳನ್ನು ರಚಿಸಿಕೊಳ್ಳುವ ಸ್ವಾತಂತ್ರ್ಯ ಪ್ರಾಂತಗಳಿಗೇ ಪ್ರಾಪ್ತವಾಗಬೇಕು. ಪ್ರಾಂತಗಳಿಗೆ ಸಾಮಾನ್ಯವಾಗಿರಬೇಕಾದ ವಿಷಯಗಳ ಬಗ್ಗೆ ನಿರ್ಣಯಮಾಡುವ ಅಧಿಕಾರ ಆ ಗುಂಪಿಗೆ ಇರತಕ್ಕದ್ದು. ೬. ಸಂಘದ ಘಟನೆಯಲ್ಲಿ ಒಂದು ವಿಭಾಗ ವನ್ನು ಕಲ್ಪಿಸಿ ಕೊಡಬೇಕು. ಅದರ ಪ್ರಕಾರ ಶಾಸನ ಸಭೆಗೆ ಮತಬಾಹುಳ್ಯದಿಂದ ಮುಂದಿನ ೧೦ ವರ್ಷಗಳ ತನಕ ಮತ್ತೂ ಆಮೇಲೆ ಪ್ರತಿ ಹತ್ತು ವರ್ಷಗಳಮೇಲೆ ವಿಧಾನದ ಬಗ್ಗೆ ಪುನಃ ವಿಚಾರಮಾಡುವ ಅಧಿಕಾರವಿರುವುದು.

(೨೩) ಘಟನಾ ರಚನೆಯ ಕಾರ್ಯವು ರೂಪಗೊಳ್ಳುವಂತೆಯೇ ಭಾರತದ ಆಡಳಿತವು ಸಾಗಬೇಕಾಗಿದೆ. ಆದುದರಿಂದ ನಾವು ಮುಖ್ಯ

ರಾಜಕೀಯ ಪಂಗಡಗಳ ಸಹಾಯದಿಂದ ನಡುಗಾಲ ಪ್ರಭುತ್ವದ ಸ್ಥಾಪನೆಗೆ ಅತ್ಯಂತ ಮಹತ್ವವನ್ನು ಕೊಡುತ್ತೇವೆ. ಭಾರತದ ಆಡಳಿತ ದಲ್ಲಿ ಒದಗುವ ದೊಡ್ಡ ಗಂಡಾಂತರಗಳನ್ನು ಎದುರಿಸಲು ಹೆಚ್ಚಿನ ಸಹ ಕಾರ ಬೇಕಾಗಿದೆ. ದೈನಂದಿನ ಆಡಳಿತದ ಕಷ್ಟಗಳಲ್ಲದೇ ಬರಗಾಲದ ಭೀತಿಯನ್ನು ಕೂಡ ಎದುರಿಸಬೇಕಾಗಿದೆ. ಭಾವೀ ಭಾರತದಮೇಲೆ ಪರಿಣಾಮ ಮಾಡುವ ಯುದ್ಧೋತ್ತರ ಪುನರ್ರಚನೆಯ ಬಗ್ಗೆ ತೀರ್ಮಾನ ಮಾಡಬೇಕಾಗಿದೆ; ಮತ್ತು ಅಂತರ್ರಾಷ್ಟ್ರೀಯ ಪರಿಷತ್ತುಗಳಲ್ಲಿ ಭಾರತದ ಪ್ರಾತಿನಿಧ್ಯ ಮಾಡಬೇಕಾಗಿದೆ. ಇವೆಲ್ಲವುಗಳಿಗಾಗಿ ಸರ್ವ ಮಾನ್ಯ ಪ್ರಭುತ್ವದ ಅವಶ್ಯಕತೆ ಇದೆ. ಇದಕ್ಕಾಗಿ ವೈಸರಾಯರು ಮಾತುಕತೆ ನಡಿಸಿದ್ದಾರೆ. ಶೀಘ್ರದಲ್ಲಿಯೇ ನಡುಗಾಲ ಪ್ರಭುತ್ವದ ಸ್ಥಾಪ ನೆ ಮಾಡುವರೆಂದು ನಂಬಿಕೆ. ನಡುಗಾಲ ಪ್ರಭುತ್ವದಲ್ಲಿ ಯುದ್ಧ ಖಾತೆ ಮೊದಲಾದ ಎಲ್ಲ ಕೈಪಟ್ಟಿಗೆಗಳನ್ನು ಭಾರತದ ಮುಂದಾಳುಗಳೇ ವಹಿಸುವರು. ಬ್ರಿಟಿಷ್ ಪ್ರಭುತ್ವವು ಈ ಬದಲಾವಣೆಗಳನ್ನು ಒಪ್ಪಿ ಆಡಳಿತದ ಕಷ್ಟಗಳನ್ನೆದುರಿಸಲು ಮತ್ತು ನಡುಗಾಲವನ್ನು ಸುಗಮ ವಾಗಿ ಕೊನೆಗಾಣಿಸಲು ಸಂಪೂರ್ಣ ಸಹಕಾರವನ್ನು ನೀಡುವುದು.

ಈ ಪ್ರಕಾರ ಇನ್ನು ಕೆಲವು ಸೂಚನೆಗಳನ್ನು ಮಂಡಿಸುತ್ತ ಮಂತ್ರಿ ಮಂಡಳಿಯ ನಿಯೋಗದ ಸದಸ್ಯರು ತಮ್ಮ ಸೂಚನೆಗಳಂತೆ ಆಚರಿಸ ಲಿಕ್ಕೆ ಹಿಂದೀಯರನ್ನು ಮನಃಪೂರ್ವಕವಾಗಿ ಕೇಳಿಕೊಂಡಿದ್ದಾರೆ. "ಈ ಸೂಚನೆಗಳನ್ನು ನಾವು ನಿಮ್ಮ ಮುಂದೆ ಮಂಡಿಸುತ್ತೇವೆ. ಯಾವ ಸದ್ಭಾವನೆಯಿಂದ ನಾವು ನಿವೇದಿಸಿರುವೆವೋ ಅದೇ ಸದ್ಭಾವನೆಯಿಂದ ನೀವು ಆ ಸೂಚನೆಗಳನ್ನು ಸ್ವೀಕರಿಸಿ ಆಚರಣೆಯಲ್ಲಿ ತರುವಿರೆಂದು ನಮಗೆ ದೃಢವಾದ ನಂಬಿಕೆ. ತಮ್ಮ ಜಾತಿ ಅಥವಾ ತಮ್ಮ ಹಿತ

ಇವುಗಳ ಮಟ್ಟಿಗೆ ಮಾತ್ರ ಸಂಕುಚಿತ ದೃಷ್ಟಿಯವರಾಗದೆ, ೪೦ ಕೋಟಿ ಹಿಂದೀ ಜನತೆಯ ಹಿತಗಳನ್ನು ಸಾಧಿಸಲಿಕ್ಕೆ ವಿಶಾಲ ದೃಷ್ಟಿಯುಳ್ಳವರಾಗಬೇಕೆಂದು ಹಿಂದುಸ್ಥಾನದ ನಿಜವಾದ ಕಲ್ಯಾಣ ಬಯಸುವ ಜನರಲ್ಲಿ ನಾವು ಮನಃಪೂರ್ವಕವಾಗಿ ಕೇಳಿಕೊಳ್ಳುತ್ತೇವೆ."

"ಹೊಸ ಸ್ವತಂತ್ರ ಭಾರತವು ಬ್ರಿಟಿಷ್ ಸ್ವತಂತ್ರ ರಾಷ್ಟ್ರಕೂಟದಲ್ಲಿ ಸದಸ್ಯ ಭಾವದಿಂದ ಇರಲಿಕ್ಕೆ ಇಚ್ಛಿಸುವುದೆಂದು ನಾವು ಆಶಿಸುತ್ತೇವೆ. ಯಾವ ಪ್ರಸಂಗದಲ್ಲಿಯೂ ನಮ್ಮ ಜನತೆಯೊಡನೆ ನಿಕಟವಾದ ಸ್ನೇಹ ಸಂಬಂಧಗಳನ್ನು ನೀವು ಇಡುವಿರೆಂದು ನಾವು ತಿಳಿಯುತ್ತೇವೆ. ನಿಮ್ಮ ಸ್ವತಂತ್ರವಾದ ಇಚ್ಛೆಯಿಂದಲೇ ಈ ವಿಷಯಗಳನ್ನು ನೀವು ನಿರ್ಣಯಿಸಿಕೊಳ್ಳಬೇಕು. ನೀವು ಹೇಗೆ ನಿರ್ಣಯಮಾಡಿದರೂ ಸರಿ. ಜಗತ್ತಿನ ಶ್ರೇಷ್ಠ ರಾಷ್ಟ್ರಗಳಲ್ಲಿ ನಿಮ್ಮ ಎಣಿಕೆಯಾಗಿ, ದಿನದಿನಕ್ಕೆ ನಿಮ್ಮ ಹೆಚ್ಚಿನ ಪ್ರಗತಿಯಾಗಲೆಂದು ನಾವು ಬಯಸುತ್ತೇವೆ. ಹಿಂದಿನ ಚರಿತ್ರೆಗಿಂತಲೂ ನಿಮ್ಮ ಭವಿತವ್ಯ ಹೆಚ್ಚು ಉಜ್ವಲವಾಗಲೆಂದು ನಮ್ಮ ಹಾರೈಕೆ."

— ಸಂಪೂರ್ಣ. —



# ಪರಿಶಿಷ್ಟ (ಅ)

## ಲಂಡನ್ ಪರಿಷತ್ತು.

ಮುಸ್ಲಿಂ ಲೀಗಿನ ಪ್ರವೇಶದಿಂದ ಸಮ್ಮಿಲಿತ ಪ್ರಭುತ್ವವು ಸರಳ ವಾಗಿ ನಡೆಯಬಹುದೆಂದು ಆಶಿಸಲಾಗಿತ್ತು. ನಡುಗಾಲ ಪ್ರಭುತ್ವದ ಸದಸ್ಯರೊಡನೆ ಸಹಕರಿಸುತ್ತೇವೆಂದು ನುಡಿದ ಲೀಗಿನವರು ಪ್ರಭುತ್ವದಲ್ಲಿ ಸೇರಿದಮೇಲೆ ಅದರಂತೆ ನಡಿಯಲಿಲ್ಲ. ಎಂದಿನಂತೆ ಪ್ರತಿಯೊಂದು ವಿಷಯದಲ್ಲಿ ಕಾಂಗ್ರೆಸ್ಸಿನೊಡನೆ ವಿರೋಧ ಮಾಡಲಾರಂಭಿಸಿದರು. ವೈಸ್‌ರಾಯರ ನೀತಿಯಲ್ಲಿ ಪರಿವರ್ತನೆಯಾಗಿದೆಂತಲೂ ಪ. ನೆಹರು ಅವರು ಹೇಳಿರುವರು. ಇದೇ ಪರಿಸ್ಥಿತಿ ಮುಂದರಿಸಿದರೆ ದೊಡ್ಡ ಸಂಕಟ ಉದ್ಭವಿಸಬಹುದೆಂದು ಅವರು ಎಚ್ಚರಿಕೆಯನ್ನಿತ್ತಿರುವರು.

ಘಟನಾಸಮಿತಿಯಲ್ಲಿ ಲೀಗಿನ ಸದಸ್ಯರು ಭಾಗವಹಿಸಕೂಡದೆಂದು ಮಿ. ಜಿನ್ನಾ ಅವರು ಆದೇಶ ಕೊಟ್ಟರು. ಪ್ರಭುತ್ವದಲ್ಲಿ ಸೇರುವುದಕ್ಕಿಂತ ಮುಂಚೆ ಇದೇ ಜಿನ್ನಾ ಅವರು ಮೇ ತಿಂಗಳ ೧೬ ನೆಯ ದಿನಾಂಕದಲ್ಲಿ ಮಂತ್ರಿಮಂಡಳಿಯ ಯೋಜನೆಯನ್ನು ಒಪ್ಪಿಕೊಂಡಿದ್ದರು. ಈ ಬಗ್ಗೆ ಅಕ್ಟೋಬರ ತಿಂಗಳ ೨೩ ನೆಯ ದಿನಾಂಕಿನಲ್ಲಿ ವೈಸ್‌ರಾಯರು ಪ. ನೆಹರು ಅವರಿಗೆ ಬರೆದು ತಿಳಿಸಿರುವರು. "ಮೇ ತಿಂಗಳ ೨೫ ನೆಯ ದಿನಾಂಕಿನ ನನ್ನ ಹೇಳಿಕೆಗೆ ಅನುಸರಿಸಿ ಮಂತ್ರಿಮಂಡಳಿಯ ನಿಯೋಗದ ಸೂಚನೆಗಳನ್ನು ಒಪ್ಪಿದಪಕ್ಷದಲ್ಲಿ ನಡುಗಾಲ ಪ್ರಭುತ್ವದಲ್ಲಿ ಮುಸ್ಲಿಂ ಲೀಗಿಗೆ ಪ್ರವೇಶ ಸಾಧ್ಯವಾಗುವುದೆಂಬದನ್ನು ಇಂದು ನಾನು ಮಿ. ಜಿನ್ನಾ ಅವರಿಗೆ ಸ್ಪಷ್ಟವಾಗಿ ಹೇಳಿದ್ದೇನೆ. ಮುಸ್ಲಿಂ ಲೀಗಿನ ಮಹಾಸಭೆಯನ್ನು ಬೇಗನೆ ಕೂಡಿಸಿ, ಈ ವಿಷಯವನ್ನು ಒಪ್ಪಿಕೊಳ್ಳಬೇಕೆಂದು

ನಾನು ಅವರಿಗೆ ತಿಳಿಸಿದ್ದೇನೆ. ನಡುಗಾಲ ಪ್ರಭುತ್ವ ಮತ್ತು ಘಟನಾಸಮಿತಿಗಳಲ್ಲಿ ಸಹಕರಿಸಬೇಕೆಂಬ ಉದ್ದೇಶದಿಂದಲೇ ಲೀಗು ಅಂಗೀಕರಿಸುವುದೆಂದು ಮಿ. ಜಿನ್ನಾ ಅವರು ನನಗೆ ಆಶ್ವಾಸನ ಕೊಟ್ಟಿದ್ದಾರೆ." ಘಟನಾಸಮಿತಿಯಲ್ಲಿ ಭಾಗ ವಹಿಸಲಿಕ್ಕೆ ಮುಸ್ಲಿಂ ಲೀಗು ನಿರಾಕರಿಸಿದರೆ ಮೇಲಿನ ವಿಧಾನದ ಪ್ರಕಾರ ಅವರ ಸದಸ್ಯರಿಗೆ ನಡುಗಾಲ ಪ್ರಭುತ್ವದಲ್ಲಿ ಸ್ಥಾನ ಪ್ರಾಪ್ತವಾಗಲಾರದೆಂದು ಕಾಂಗ್ರೆಸ್ಸಿನ ಮಂತ್ರಿಗಳು ಹೇಳಿದರು. ಇದರಿಂದ ರಾಜಕೀಯ ಮುಗ್ಗಟ್ಟು ಹುಟ್ಟುವ ಸಂಭವವಿತ್ತು. ಅದನ್ನು ದೂರಮಾಡಿ ಮುಂಚೆ ನಿಶ್ಚಿತವಾದಂತೆ ಘಟನಾಸಮಿತಿಯಲ್ಲಿ ಎಲ್ಲ ಪಂಗಡದವರು ಕೂಡಿ ಕೆಲಸಮಾಡಬೇಕೆಂಬ ಉದ್ದೇಶದಿಂದ ಡಿಶಂಬರ ತಿಂಗಳ ೩ ನೆಯ ದಿನಾಂಕದಲ್ಲಿ ಲಂಡನ್ನಿನಲ್ಲಿ ಪರಿಷತ್ತನ್ನು ಕೂಡಿಸಿ ಸಮಾಲೋಚನೆ ಮಾಡಲು ಪಂ. ಜವಾಹರಲಾಲ ನೆಹರು, ಸರದಾರ್ ಬಲದೇವ ಸಿಂಗ, ಮಿ. ಜಿನ್ನಾ ಮತ್ತು ಮಿ. ಲಿಯಾಕತ್ ಅಲಿಖಾನ್ ಈ ಮುಖಂಡರನ್ನು ಬ್ರಿಟಿಷ್ ಮುಖ್ಯಮಂತ್ರಿಗಳಾದ ಮಿ. ಏಟ್ಲೆ ಅವರು ಬರಮಾಡಿಕೊಂಡರು. ೬ ನೆಯ ಡಿಶಂಬರಿನ ದಿನ ಒಂದು ಸಂಯುಕ್ತ ಸಭೆ ಕೂಡಿಸಿ ಉಭಯ ಪಂಗಡದವರೊಡನೆ ಚರ್ಚೆ ಮಾಡಿ ಬ್ರಿಟಿಷ್ ಪ್ರಭುತ್ವದವರು ಕೆಳಗಿನ ಹೇಳಿಕೆಯನ್ನು ಪ್ರಕಟಿಸಿದರು.

"ಮೇ ತಿಂಗಳ ೧೬ ನೆಯ ದಿನಾಂಕದ ಕ್ಯಾಬಿನೆಟ್ ನಿಯೋಗದ ಹೇಳಿಕೆಯ ೧೯ ನೆಯ ವಿಭಾಗದ ೫ ಮತ್ತು ೮ ಈ ಉಪವಿಭಾಗಗಳ ಅರ್ಥಾನುವಾದದ ಬಗ್ಗೆ ತೊಡಕು ಹುಟ್ಟಿದೆ. ಅವು ಕೆಳಗಿನಂತಿವೆ.

೫ ಈ ವಿಭಾಗಗಳು ಪ್ರಾಂತಗಳ ಸಲುವಾಗಿ ಘಟನೆಯನ್ನು ರಚಿಸಲಾರಂಭಿಸುವುವು. ಪ್ರಾಂತಗಳಿಂದೊಡಗೂಡಿದ ಒಂದು ಗುಂಪನ್ನು ನಿರ್ಮಾಣ ಮಾಡುವುದು ಸಾಧ್ಯವೆಂಬುದನ್ನು ನಿಶ್ಚಯಿಸಲ್ಪಡುವುದು.

ಅದು ಸಧ್ಯವೆಂದು ಕಂಡುಬಂದರೆ ಆ ಗುಂಪು ಯಾವ ಪ್ರಾಂತೀಯ ವಿಷಯಗಳನ್ನು ಕೈಕೊಳ್ಳಬಹುದೆಂಬದನ್ನು ನಿರ್ಣಯಿಸಲಾಗುವದು. ಕೆಳಗೆ ಕಾಣಿಸಿದ ೮ ನೆಯ ಉಪವಿಭಾಗದ ಪ್ರಕಾರ ಆ ಗುಂಪನ್ನು ಬಿಟ್ಟು ಹೋಗುವ ಅಧಿಕಾರ ಪ್ರಾಂತಗಳಿಗೆ ಪ್ರಾಪ್ತವಾಗಿರುವದು."

(೧೯) [೮] "ಹೊಸ ಘಟನಾತ್ಮಕ ವ್ಯವಸ್ಥೆಗಳು ಆಚರಣೆಯಲ್ಲಿ ಬಂದಕೂಡಲೇ ಯಾವದೊಂದು ಪ್ರಾಂತಕ್ಕೆ ಮನಸು ಮಾಡಿದರೆ ಗುಂಪಿನಿಂದ ಹೊರಬೀಳಬಹುದು. ಹೊಸ ವಿಧಾನವನ್ನನುಸರಿಸಿ ಮೊದಲನೆಯ ಸಾಮಾನ್ಯ ಆಯ್ಕೆ ಆದಮೇಲೆ ಆ ಪ್ರಾಂತದ ಹೊಸ ಶಾಸನ ಸಭೆಯು ಇಂತಹ ನಿರ್ಣಯವನ್ನು ತೆಗೆದುಕೊಳ್ಳಬಹುದು."

ಒಪ್ಪಂದವಾಗದಿದ್ದ ಪಕ್ಷದಲ್ಲಿ, ಆ ವಿಭಾಗದ ಪ್ರತಿನಿಧಿಗಳ ಸರಳವಾದ ಸಂಖ್ಯಾ ಬಾಹುಳ್ಯದ ಅಭಿಮತದಿಂದ ನಿರ್ಣಯವನ್ನು ಮಾಡಬೇಕೆಂದು ಮಂತ್ರಿಮಂಡಳಿಯ ನಿಯೋಗವು ಎಂದಿನಿಂದಲು ಪ್ರತಿಪಾದಿಸುತ್ತಿರುವುದು. ಈ ಅಭಿಪ್ರಾಯವನ್ನು ಮುಸ್ಲಿಂ ಲೀಗು ಅಂಗೀಕರಿಸಿದೆ. ಆದರೆ ಕಾಂಗ್ರೆಸು ಈ ಬಗ್ಗೆ ಭಿನ್ನವಾದ ಅಭಿಪ್ರಾಯ ವ್ಯಕ್ತಮಾಡುವುದು. ಗುಂಪಿನಲ್ಲಿ ಸೇರಲಿಕ್ಕೆ ವಿನಃ ವಿಧಾನವನ್ನು ರಚಿಸಿಕೊಳ್ಳಲಿಕ್ಕೆ ಅಧಿಕಾರ ಇರುವುದು ಸಂಪೂರ್ಣ ಹೇಳಿಕೆಯ ಅಭಿಪ್ರಾಯವೆಂದು ಅದು ಅರ್ಥಾನುವಾದ ಮಾಡುವುದು. ಸಾರ್ವಭೌಮರ ಪ್ರಭುತ್ವದವರು ಈ ಬಗ್ಗೆ ಶಾಸನ ಪಂಡಿತರಿಂದ ಅಭಿಪ್ರಾಯ ಪಡೆದಿರುವರು. ಮೇ ತಿಂಗಳ ೧೬ ನೆಯ ದಿನಾಂಕದ ಹೇಳಿಕೆ ಮಂತ್ರಿಮಂಡಳಿಯ ನಿಯೋಗದವರು ಹೇಳುತ್ತಿರುವ ಉದ್ದೇಶವನ್ನು ವ್ಯಕ್ತಮಾಡುತ್ತದೆಂದು ಆ ಅಭಿಪ್ರಾಯ ದೃಢೀಕರಿಸುವುದು. ಈ ಪ್ರಕಾರ ಅಭಿಪ್ರಾಯಕೊಡುವ ಹೇಳಿಕೆಯ ಈ ಭಾಗವು ಮಹತ್ವಪೂರ್ಣ ಆಗಿದೆ. ಇದು ಮೇ ೧೬ ನೆಯ ದಿನಾಂಕದ ಹೇಳಿಕೆಯ ಅಂಗವಾಗಿದ್ದು ಇದರ ಆಧಾರದಿಂದ ಹಿಂದೀಯರು ವಿಧಾನವನ್ನು ರಚಿಸಿಕೊಳ್ಳಬಲ್ಲರು. ಅದನ್ನು ಮುಂದೆ ಸಾರ್ವಭೌಮರ ಪ್ರಭುತ್ವದವರು ಪಾರ್ಲಿಮೆಂಟಿನಲ್ಲಿ ಮಂಡಿಸುವರು. ಘಟನಾ ಸಮಿತಿಯಲ್ಲಿ ಎಲ್ಲ ಪಂಗಡದವರು ಇದನ್ನು ಒಪ್ಪಿಕೊಳ್ಳಬೇಕು. ಮೇ ೧೬ ನೆಯ ದಿನಾಂಕದ ಹೇಳಿಕೆಯ ಅರ್ಥಾನುವಾದದ

ಬಗ್ಗೆ ಬೇರೆ ಪ್ರಶ್ನೆಗಳು ಉದ್ಭವಿಸಬಹುದು. ಮುಸ್ಲಿಂ ಲೀಗಿನ ಕೌನ್ಸಿಲ್ ಘಟನಾ ಸಮಿತಿಯಲ್ಲಿ ಭಾಗವಹಿಸಲಿಕ್ಕೆ ಒಪ್ಪಿಕೊಂಡರೆ, ಕಾಂಗ್ರೆಸ್ಸಿನಂತೆ ವಾದಗ್ರಸ್ತ ವಿಷಯಗಳನ್ನು ಸಂಘಟಿತ ನ್ಯಾಯಸ್ಥಾನಕ್ಕೆ (ಫೆಡರಲ್ ಕೋರ್ಟಿಗೆ) ಒಪ್ಪಿಸಬೇಕೆಂತಲು ಮತ್ತು ಅದರ ನಿರ್ಣಯವನ್ನು ಸ್ವೀಕರಿಸಬೇಕೆಂತಲು ಅನುಮತಿ ಕೊಡಬಹುದೆಂದು ಸಾರ್ವಭೌಮಿಕ ಪ್ರಭುತ್ವವು ಆಶಿಸುವುದು. ಹೀಗಾದಪಕ್ಷದಲ್ಲಿ ಮಂತ್ರಿಮಂಡಳಿಯ ನಿಯೋಗದ ಯೋಜನೆಯ ಕ್ರಮವನ್ನು ಘಟನಾಸಮಿತಿ ಮತ್ತು ವಿಭಾಗಗಳಲ್ಲಿ ಒಪ್ಪಲಾಗುವುದು.

"ಈಗ ವಾದಗ್ರಸ್ತವಾದ ವಿಷಯವೆಂದರೆ ಕ್ಯಾಬಿನೆಟ್ ನಿಯೋಗದ ಅಭಿಪ್ರಾಯ. ಅದನ್ನು ಒಪ್ಪಿಕೊಳ್ಳಬೇಕೆಂದು ಸಾರ್ವಭೌಮಿಕ ಪ್ರಭುತ್ವದವರು ಕಾಂಗ್ರೆಸ್ಸನ್ನು ಆಗ್ರಹದಿಂದ ಕೇಳುತ್ತದೆ. ಯಾಕೆಂದರೆ ಇದರಿಂದ ತನ್ನ ಧೋರಣೆಯ ಬಗ್ಗೆ ಪುನರ್ವಿಚಾರಣೆ ಮಾಡಲಿಕ್ಕೆ ಮುಸ್ಲಿಂ ಲೀಗು ಸಿದ್ಧವಾಗಬಹುದು"

"ಮಂತ್ರಿಮಂಡಳಿಯ ನಿಯೋಗವು ತನ್ನ ಉದ್ದೇಶವನ್ನು ಪುನಃ ಸ್ಪಷ್ಟಮಾಡಿ ಹೇಳಿತು. ಘಟನಾ ಸಮಿತಿಯು ಈ ಮಹತ್ವದ ವಿಷಯಗಳನ್ನು ಸಂಘಟಿತ ನ್ಯಾಯಾಸ್ಥಾನಕ್ಕೆ ಕೇಳಬೇಕಂದು ಬಯಸುತ್ತದೆ. ಬೇಗನೆ ಅದರಂತೆ ಮಾಡಬಹುದು. ಘಟನಾಸಮಿತಿಯು ವಿಭಾಗಗಳ ಸಭೆಯನ್ನು, ಸಂಘಟಿತ ನ್ಯಾಯಸ್ಥಾನದ ನಿರ್ಣಯ ಗೊತ್ತಾಗುವತನಕ, ಮುಂದಕ್ಕೆ ಹಾಕಬೇಕು. ಒಪ್ಪಂದದ ತಳಹದಿಯ ಮೇಲೆ ಕೆಲಸ ಮಾಡಬೇಕು. ಅದರ ಹೊರತು ಘಟನಾಸಮಿತಿಗೆ ಎಂದಿಗೂ ಯಶ ಬರಲಾರದು. ಹಿಂದುಸ್ಥಾನದ ಜನತೆಯ ಬಹುಭಾಗ ಪ್ರಾತಿನಿಧ್ಯವಾಗದ ಘಟನಾ ಸಮಿತಿಯು ಘಟನೆಯನ್ನು ರಚಿಸಿದರೆ, ಅಸಮಾಧಾನಪಟ್ಟ ಜನಾಂಗದಮೇಲೆ ಅಂಥ ಘಟನೆಯನ್ನು ಹೊರಿಸಬೇಕೆಂದು ಸಾರ್ವಭೌಮಿಕ ಪ್ರಭುತ್ವದವರು ಬಯಸುವದಿಲ್ಲ, ಈ ವಿಷಯದಲ್ಲಿ ಕಾಂಗ್ರೆಸ್ಸು ಕೂಡ ಇದೇ ಅಭಿಪ್ರಾಯ ಉಳ್ಳದ್ದಾಗಿದೆ"

——o——

# ಪರಿಶಿಷ್ಟ (ಬ)

## ಸ್ವ ತ ಂ ತ್ರ ಸಾ ರ್ವ ಭೌ ಮ ಪ್ರ ಜಾ ರಾ ಜ್ಯ .

"ಸ್ವತಂತ್ರ ಸಾರ್ವಭೌಮ ಪ್ರಜಾರಾಜ್ಯವೇ ಘಟನಾಸಮಿತಿಯ ಮುಖ್ಯ ಉದ್ದೇಶ" ಎಂದು ಹೇಳುತ್ತ ಆ ಬಗ್ಗೆ ಘಟನಾಸಮಿತಿಯಲ್ಲಿ ಪ. ನೆಹರು ಅವರು ಮುಂಡಿಸಿದ ಪ್ರಸ್ತಾವ ಮಹತ್ವಪೂರ್ಣವಾಗಿದೆ. ಅದರ ಸಾರಾಂಶ ಕೆಳಗಿನಂತೆ ಇದೆ. "ಹಿಂದುಸ್ಥಾನವು ಸ್ವತಂತ್ರ ಸಾರ್ವಭೌಮ ಪ್ರಜಾರಾಜ್ಯವೆಂದು ಸಾರುವ ತನ್ನ ಗಂಭೀರವಾದ ದೃಢನಿಶ್ಚಯವನ್ನು ವ್ಯಕ್ತಮಾಡುತ್ತದೆ. ಸ್ವಾಯತ್ತತೆ ಉಳ್ಳ ಸಂಸ್ಥಾನಗಳು ಮತ್ತು ಪ್ರಾಂತಗಳು ಇವುಗಳಿಂದೊಳಗೊಂಡ ಒಂದು ಸಂಘದ ನಿರ್ಮಾಣ ಮಾಡಲಾಗುವದು. ಹಿಂದುಸ್ಥಾನದ ಭಾವಿ ಘಟನೆ ಪ್ರಜಾಪ್ರಭುತ್ವದ ತತ್ವಗಳಿಗನುಸರಿಸಿ ರಚಿಸಲ್ಪಡುವುದು. ಧರ್ಮ, ಸ್ತ್ರೀ ಅಥವಾ ಪುರುಷಜಾತಿ ಇಲ್ಲವೆ ಪ್ರಾಂತಗಳ ವಾಸಸ್ಥಾನ ಇವುಗಳನ್ನು ಅನುಲಕ್ಷಿಸದೆ ಪ್ರತಿಯೊಬ್ಬ ನಾಗರಿಕನಿಗೆ ಶಾಸನದ ದೃಷ್ಟಿಯಿಂದ ಸಮಾನವಾದ ಹಕ್ಕುಗಳು ಪ್ರಾಪ್ತವಾಗುವುವು. ಭಾಷಣ, ಪೂಜೆ ಸಂಘ ಇವುಗಳ ಸ್ವಾತಂತ್ರ್ಯ ಶಾಸನಕ್ಕೆ ಅನುಸರಿಸಿ ಅವನಿಗೆ ಪ್ರಾಪ್ತವಾಗುವುದು."

"ಮುಂಬರುವ ಸ್ವಾತಂತ್ರ್ಯವನ್ನು ದೇಶೀಯ ಸಂಸ್ಥಾನಗಳ ಜನತೆ ಸಂಪೂರ್ಣವಾಗಿ ಅನುಭವಿಸಬೇಕು. ಸಂಸ್ಥಾನದೊಳಗಿನ ಮತ್ತು ಸಂಸ್ಥಾನದ ಹೊರಗಿನ ಜನತೆಗಳು ಅನುಭವಿಸಬೇಕಾದ ಸ್ವಾತಂತ್ರ್ಯದ ತರಗತಿಯಲ್ಲಿ ಭೇದವನ್ನು ಕಲ್ಪಿಸುವುದು ನನ್ನ ವಿಚಾರಶಕ್ತಿಗೆ ಮೀರಿದ ಮಾತು. ಸಂಸ್ಥಾನಗಳು ಹಿಂದುಸ್ಥಾನದ ಸಂಘದ ಅವಿಭಾಜ್ಯ

ಅಂಗಗಳಾಗಬೇಕು. ಈ ವಿಷಯವನ್ನು ಸಂಸ್ಥಾನಗಳ ಪ್ರತಿನಿಧಿಗಳೊಡನೆ ಘಟನಾಸಮಿತಿಯು ವಿಚಾರ ಮಾಡಬೇಕು. ಸಂಸ್ಥಾನಾಧಿಪತಿಗಳು ಅಥವಾ ಅವರ ಪ್ರತಿನಿಧಿಗಳೊಡನೆ ಈಗ ನಾವು ಮಾತುಕತೆ ಆಡಲಿಕ್ಕೆ ಸಿದ್ಧರಿದ್ದೇವೆ. ಆದರೆ ಮುಂದೆ ದೇಶೀಯ ಸಂಸ್ಥಾನಗಳ ಜನತೆಯು ಪ್ರತಿನಿಧಿಗಳ ಸಹಾಯದಿಂದಲೇ ನಾವು ಘಟನೆಯನ್ನು ರಚಿಸ ಬಯಸುತ್ತೇವೆ."

"ಇಂಗ್ಲಂಡಿನಲ್ಲಿ ಕೆಲವು ಜನರು ಮತ್ತು ಇಲ್ಲಿ ಸಂಸ್ಥಾನಾಧಿಪತಿಗಳು ಪ್ರಜಾರಾಜ್ಯವನ್ನು ಒಪ್ಪಲಿಕ್ಕಿಲ್ಲ. ಆದರೆ ಹಿಂದುಸ್ಥಾನದ ಜನತೆ ಪ್ರಜಾರಾಜ್ಯವನ್ನೇ ಹೆಗ್ಗುರಿಯಾಗಿ ಇಟ್ಟುಕೊಂಡಿದೆ. ಹಿಂದುಸ್ಥಾನವು ಪ್ರಜಾರಾಜ್ಯವಾಗುವದಾದಕಾರಣ ಯಾವದೊಂದು ಸಂಸ್ಥಾನದ ಜನತೆಯು ಅರಸುತನವನ್ನು ಉಳಿಸಿಕೊಳ್ಳಲಿಕ್ಕೆ ಆಶಿಸಿದರೆ ಆ ಬಗ್ಗೆ ಅದು ವಿರೋಧ ಮಾಡಲಾರದು. ಆದರೆ ಇಂಥ ಸಂಸ್ಥಾನದಲ್ಲಿ ಜನತೆಗೆ ಸಂಪೂರ್ಣ ಪ್ರಜಾಧಿಪತ್ಯ ಪ್ರಾಪ್ತವಾಗಿ ಅಲ್ಲಿಯ ಅರಸನು ಕೇವಲ ವೈಧಾನಿಕ ಮುಖ್ಯನಾಗಿರಬೇಕು."

"ಈ ಠೀಮರ್ಾನ ಜನತೆಯ ಉದ್ಧಾರಕ್ಕಾಗಿ ಮಾಡಿದ ಪ್ರತಿಜ್ಞೆ. ಘಟನೆಯನ್ನು ರಚಿಸುವುದರಲ್ಲಿ ಅದರ ಪರಿಪಾಲನೆ ಮಾಡಬೇಕು."



# ಪಾರಿಭಾಷಿಕ ಶಬ್ದಗಳು.

| | | |
|---|---|---|
| ೧. | ಆಧಿಪತ್ಯ, ಸಾರ್ವಭೌಮತ್ವ | Sovereignty |
| ೨. | ಸಾರ್ವಭೌಮ, ಆಧಿಪತ್ಯ ಉಳ್ಳ | Soverign |
| ೩. | ಮಹಾಧಿಪತ್ಯ | Paramountcy |
| ೪. | ಸ್ವಯಂ ನಿರ್ಣಯ | Self-determination |
| ೫. | ಸ್ವರಾಜ್ಯ | Self- government |
| ೬. | ವಿಕೇಂದ್ರೀಕರಣ | Decentarlisation |
| ೭. | ಕುಲಗಳ ಪ್ರದೇಶ | Tribal areas |
| ೮. | ಸ್ವಾಯತ್ತತೆ | Autonomy |
| ೯. | ವಸಾಹತಿ ಯೋಗ್ಯತೆ | Dominion Status |
| ೧೦. | ಸಂಯುಕ್ತ ರಾಷ್ಟ್ರಗಳ ಸಂಘ | United Nations Organisation |
| ೧೧. | ಪ್ರಾದೇಶತ್ವ | Regionalism |
| ೧೨. | ಘಟನೆ; ವಿಧಾನ | Constitution |
| ೧೩. | ಸ್ವತಂತ್ರ ರಾಷ್ಟ್ರಕೂಟ | Common-wealth of Nations |
| ೧೪. | ರಾಜಕೀಯ ಸಜಾತಿಯತೆ | Political homogenity |
| ೧೫. | ಸಾಮುದಾಯಕ ಹೊಣೆ | Collective Responsibility |
| ೧೬. | ನೇರವಾದ ಕೃತ್ಯ | Direct action |
| ೧೭. | ಪ್ರಭುಗಳ ಸಭೆ | House of Lords |
| ೧೮. | ಸಾಮಾನ್ಯರ ಸಭೆ | House of Commons |
| ೧೯. | ನಡುಗಾಲ ಪ್ರಭುತ್ವ | Interim Government |
| ೨೦. | ಕೇಂದ್ರ ಪ್ರಭುತ್ವ | Central Government |

೨೧. ಕಾರ್ಯ ಸಭೆ — Executive Council

೨೨. ರಾಷ್ಟ್ರೀಯ ಪ್ರಭುತ್ವ — National Government

೨೩. ಮಂತ್ರಿ ಮಂಡಳಿ — Ministry

೨೪. ಮಂತ್ರಿಮಂಡಳಿ; ವಿಶಿಷ್ಟ ಮಂತ್ರಿಮಂಡಳಿ — Cabinet

೨೫. ಸಾಮ್ರಾಜ್ಯ ವ್ಯವಹಾರಗಳು — Common-wealth Relation

೨೬. ವಿದೇಶಿಯ ರಾಜ್ಯತಂತ್ರ — Foreign affairs

೨೭. ಬ್ರಿಟಿಷ್ ಸ್ವತಂತ್ರ ರಾಷ್ಟ್ರಕೂಟ — British Common-wealth

೨೮. ಸಾರ್ವಭೌಮರ ಪ್ರಭುತ್ವ — His Majesty's Government

೨೯. ನಿಯೋಗ — Delegation

೩೦ ವೈಧಾನಿಕ ಮುಖ್ಯ — Constitutional Head

# ಒಪ್ಪೋಲೆ.

| ಪುಟ. | ಸಾಲು | ತಪ್ಪು | ಒಪ್ಪು |
|---|---|---|---|
| ಮುನ್ನುಡಿ | ೨ | ಪತಿಸ್ಥಿತಿ | ಪರಿಸ್ಥಿತಿ |
| ೪ | ೨೦ | ಆದುವರಿಂದ | ಅದರಿಂದ |
| ೧೨ | ೩ | ಸೂಚಿನೆ | ಸೂಚನೆ |
| ೨೬ | ೧೫ | ಆಸಾಧ | ಅಸಾಧ್ಯ |
| ೨೭ | ೯ | ಅವಶ್ಯಕ | ಆವಶ್ಯಕ |
| ೨೮ | ೧೩ | ಒಂದಾಗುವದವಶ್ಯಕ | ಒಂದಾಗುವದಾವಶ್ಯಕ |
| ೫೨ | ೧೦ | ಘೊಹಣೆ | ಘೋಷಣೆ |
| ೫೬ | ೧೮ | ಪರಿಷ್ಕರಣ | ಪರೀಕ್ಷಣ |
| ೫೮ | ೭ | ಪರಿಷ್ಕಾರ | ಪರೀಕ್ಷಣ |
| ೬೫ | ೧೧ | ಮಾಡವರೆಂದು | ಮಾಡುವರೆಂದು |
| ೬೯ | ೧೩ | ಪ್ರತಿವಾದಿಸುತ್ತಿರುವುದು | ಪ್ರತಿಪಾದಿಸುತ್ತಿರುವುದು |
| ೭೨ | ೨ | ಘಟನಾ | ಘಟನಾ |

